# ದಾಸತತ್ತ್ವಪ್ರಕಾಶಿಕೆ

## (ಭಜನೆ ಕುಸುಮ 1)



ಪ್ರಕಾಶಕರು

ದಾಸಸಾಹಿತ್ಯ ಪ್ರಾಜೆಕ್ಟ್

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾಸತತ್ತ್ವಪ್ರಕಾಶಿಕೆ
## (ಭಜನೆ ಕುಸುಮ 1)


ಸಂಪಾದಕ

ಕೆ. ಅಪ್ಪಣ್ಣಾಚಾರ್ಯ

ಸ್ಪೆಷಲ್ ಆಫೀಸರ್

ದಾಸಸಾಹಿತ್ಯ ಪ್ರಾಜೆಕ್ಟ್

ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.






ಪ್ರಕಾಶಕರು

ದಾಸಸಾಹಿತ್ಯ ಪ್ರಾಜೆಕ್ಟ್

ತಿರುಮಲೆ ತಿರುಪತಿ ದೇವಸ್ಥಾನಗಳು

ತಿರುಪತಿ

1995

DASATATVA PRAKASIKE

(Bhajane Kusuma 1)

By

K.Appannacharya

T. T. D. Religious Publications Series No. 467

Copies : 5,000

Published by :

Sri N. RAMESHKUMAR, I.A.S.,

Executive Officer,

Tirumala Tirupati Devasthanams, Tirupati.

Printed at :

Tirumala Tirupati Devasthanams Press, Tirupati.

# ಒಂದು ಕ್ಷಣ

'ದಾಸತತ್ತ್ವ ಪ್ರಕಾಶಿಕೆ'ಯ ಪ್ರಕಟನೆ ನನ್ನ ಬಹಳ ಹಳೆಯ ಕನಸು. ಶ್ರೀನಿವಾಸ ಅದನ್ನು ಈಗ ನನಸನ್ನಾಗಿಮಾಡಿದನು. ಹರಿದಾಸಸಾಹಿತ್ಯಗಂಗೆಯನ್ನು ಹರಿಸಿದ ಭಗೀರಥಗೋರಾಬಾಳ್ ಹನುಮಂತರಾಯರು ತಮ್ಮ ಸದಾಚಾರ ಗ್ರಂಥದಲ್ಲಿ ಭಜನಾಪದ್ಧತಿಗೆ ಮಾರ್ಗದರ್ಶನ ಮಾಡಿರುವರು. ಅವರು ಹೇಳಿದ ಪದ್ಧತಿ ಪ್ರಾಣೇಶದಾಸರೇ ಮೊದಲಾದ ಹರಿದಾಸರಿಗೆ ಸಮ್ಮತವಾದುದು. ಇದೇ ದಾಸಸಾಹಿತ್ಯ ಪ್ರೇಮಿಗಳೆಲ್ಲರಿಗೂ ಅನುಸರಣೀಯವಾದುದು.

ಈ ಹೊತ್ತಿಗೆಯ ಸಂಪಾದನೆಯ ಕಾರ್ಯದಿಂದ ಹಿಡಿದು ಶುದ್ಧ ಪ್ರತಿಯ ತಯಾರಿಕೆಯವರೆವಿಗೂ ಪ್ರತಿ ಹಂತದಲ್ಲೂ ಕೆ. ಅಶ್ವತ್ಥರಾಯರು (ವರದವಿಠಲರ ಮೊಮ್ಮಕ್ಕಳು) ನನಗೆ ತಮ್ಮ ಸಂಪೂರ್ಣ ಸಹಕಾರವನ್ನು ನೀಡಿದ್ದಾರೆ. ಇವರ ಉಪಕಾರ ಸದಾ ಸ್ಮರಣೀಯವಾಗಿದೆ.

ಪ್ರಧಾನ ಪ್ರಕಾಶಕನು ಸರ್ವೇಶನಾದ ಶ್ರೀನಿವಾಸನಾಗಿರುವನು. ಎರಡನೆಯ ಪ್ರಕಾಶಕರು ಆ ಸ್ವಾಮಿಯ ಆಜ್ಞಾಧಾರಿಗಳೂ, ತಿರುಮಲೆ ತಿರುಪತಿ ದೇವಸ್ಥಾನಗಳ ದಕ್ಷಕಾರ್ಯನಿರ್ವಹಣಾಧಿಕಾರಿಗಳೂ ಆದ ರಮೇಷ್‌ಕುಮಾರ್ ಐ.ಎ.ಎಸ್. ಆಗಿರುವರು. ಇವರಿಗೆ ದಾಸಸಾಹಿತ್ಯ ಪ್ರೇಮಿಗಳೆಲ್ಲರ ಪರವಾಗಿ ಅನಂತ ನಮನಗಳು.

ಸಂಪಾದಕ

**ಕೆ. ಅಪ್ಪಣ್ಣಾಚಾರ್ಯ**

# ಪ್ರಕಟನೆಯ ಮುಖ್ಯ ಉದ್ದೇಶ

ಹರಿದಾಸಸಾಹಿತ್ಯ ಜನಜೀವನದಲ್ಲಿ ಧರ್ಮಜಾಗ್ರತೆಯನ್ನುಂಟುಮಾಡುವ ದಿವ್ಯ ಸಾಹಿತ್ಯ. ಈ ಸಾಹಿತ್ಯಕ್ಕೆ ಒಂದು ಭವ್ಯವಾದ ಪರಂಪರೆಯಿದೆ. ಈ ಸಾಹಿತ್ಯವನ್ನು ಸರ್ವತೋಮುಖವಾಗಿ ಬೆಳಸಿದವರು ಕರ್ನಾಟಕ ಸಂಗೀತ ಪಿತಾಮಹರಾದ ಶ್ರೀ ಪುರಂದರದಾಸರು. ಸೃಷ್ಟಿಯ ರಹಸ್ಯದಿಂದ ಹಿಡಿದು ನೀತಿಯ ನುಡಿಗಟ್ಟಿನ ವರೆಗೆ ಎಲ್ಲ ವಿಷಯಗಳು ಈ ದಾಸಸಾಹಿತ್ಯದಲ್ಲಿ ಕಂಡುಬರುತ್ತವೆ. ಶ್ರುತಿ - ಸ್ಮೃತಿ - ಪುರಾಣಗಳಿಗೆ ಇದು ಕೈಗನ್ನಡಿಯಾಗಿದೆ.

ಹರಿದಾಸಸಾಹಿತ್ಯಪ್ರೇಮಿಗಳ ದೌರ್ಭಾಗ್ಯವೋ ಎನ್ನುವಂತೆ ಈ ಅಪೂರ್ವಸಾಹಿತ್ಯ ಇಂದು ಸಂಪೂರ್ಣವಾಗಿ ಉಪಲಬ್ಧವಿಲ್ಲ. ಸಾಹಿತ್ಯದ ಹೆಚ್ಚಿನ ಭಾಗ ಶ್ರುತಿಗಳಂತೆ ಬಾಯಿಯಿಂದ ಬಾಯಿಗೆ ಬಂದುದಾಗಿದೆ. ಇದರಿಂದಾಗಿ ಪಾಠಾಂತರಗಳು ಹೆಚ್ಚಿಗೆ ಕೃತಿಗಳಲ್ಲಿ ನುಸುಳಿಕೊಂಡಿವೆ. ಇದಲ್ಲದೆ ದಾಸರು ಬಳಸಿದ ಶಬ್ದಕ್ಕೆ ಸರಿಯಾದ ಅರ್ಥವು ಗೋಚರಿಸದೇ ಇರುವುದರಿಂದಲೂ, ರಾಗತಾಳಗಳ ಅಜ್ಞಾನದಿಂದಲೂ, ರಚನಾಗತಿಯ ಪರಿಚಯಾಭಾವದಿಂದಲೂ ಹೊಸಪಾಠಗಳು ಸೇರಿಕೊಂಡಿವೆ. ಇದರಿಂದಾಗಿ ಹರಿದಾಸರ ಒಂದೇ ಕೃತಿ ವಿವಿಧ ಪ್ರಾಂತಗಳಲ್ಲಿ ಬೇರೇ ಬೇರೇ ಪಾಠಗಳಿಂದ ಬಳಕೆಯಾಗುತ್ತಿರುವುದು. ಈ ಅನಾಹುತವನ್ನು ತಡೆದು ಹರಿದಾಸರ ಕೃತಿಗಳಲ್ಲಿ ಏಕಪಾಠದ ಸಂಪಾದನೆಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯಾ ಪ್ರಾಜೆಕ್ಟ್ ತನ್ನೊಡನೆ ಸಂಪರ್ಕ ಬೆಳಸಿಕೊಂಡ ಭಜನಾಮಂಡಳಿಗಳಿಗೆ "ದಾಸತತ್ತ್ವ ಪ್ರಕಾಶಿಕೆ" ಎನ್ನುವ ಕಿರುಹೊತ್ತಿಗೆಗಳನ್ನು ಆಗಾಗ ನೀಡಲು ಸಿದ್ಧವಾಗಿದೆ.

ದಾಸಸಾಹಿತ್ಯಾಭಿಮಾನಿಗಳೆಲ್ಲರೂ ನಮ್ಮ ಈ ಪ್ರಯತ್ನವನ್ನು ತುಂಬು ಹೃದಯದಿಂದ ಸ್ವಾಗತಿಸುವರೆಂದು ನಂಬುತ್ತೇನೆ. ಇದರಲ್ಲಿ ಬರುವ ವಿಷಯಗಳನ್ನು ಮೈಗೂಡಿಸಿಕೊಂಡು ತದ್ವಾರಾ ಸಕಲ ಹರಿದಾಸರ ಅಂತರ್ಯಾಮಿಯಾದ ಶ್ರೀನಿವಾಸನ ವಿಶೇಷಾನುಗ್ರಹಕ್ಕೆ ಪಾತ್ರರಾಗ ಬೇಕಾಗಿ ಪ್ರಾರ್ಥನೆ.

**ಎನ್. ರಮೇಷ್‌ಕುಮಾರ್** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿರುಮಲೆ ತಿರುಪತಿ ದೇವಸ್ಥಾನಗಳು.

# ದಾಸತತ್ತ್ವ ಪ್ರಕಾಶಿಕೆ

## ಕಲಿಯುಗ

ಕೃತಯುಗದಲ್ಲಿ ಧರ್ಮಕ್ಕೆ ಅಗ್ರಸ್ಥಾನ. ಅಲ್ಲಿಂದ ಪ್ರತಿಯುಗದಲ್ಲಿ ಆ ಧರ್ಮವು ಕುಗ್ಗುತ್ತಾ ಬಂದಿತು. ಕೊನೆಯದಾದ ಈ ಕಲಿಯುಗದಲ್ಲಿ ಕೇವಲ ಅಧರ್ಮವೇ ತಾಂಡವಿಸುತ್ತಿರುವುದು. ಕಲಿಯುಗ ಕಲಿಗೆ ಆವಾಸಸ್ಥಾನ. ಅಧರ್ಮಕ್ಕೆ ತವರೂರು. ಆದಾಗ್ಯೂ ಇಲ್ಲಿ ಸಾಧನೆ ಸುಲಭ. ತಿಲದಷ್ಟು ಸತ್ಸಾಧನೆ ಪರ್ವತದಷ್ಟು ಪುಣ್ಯವನ್ನು ತಂದೀಯುವುದು. ಅದಕ್ಕಾಗಿಯೇ ವೇದವ್ಯಾಸರು -- "ಕಲಿಸ್ಸಾಧುಃ, ಕಲಿಸ್ಸಾಧುಃ, ಕಲಿಸ್ಸಾಧುಃ, ಕಲಿಸ್ಸಾಧುಃ" ಎಂದು ನಾಲ್ಕುಸಲ ನುಡಿದಿರುವರು. ಇದನ್ನೇ ಪುರಂದರದಾಸರು--

"ಕಲಿಯುಗದಲಿ ಹರಿನಾಮವ ನೆನೆದರೆ
ಕುಲಕೋಟಿಗಳುದ್ಧರಿಸುವವ್ವೋ ರಂಗಾ"

ಎಂದು ಹಾಡಿ ಕಲಿಯುಗದ ಪ್ರಾಶಸ್ತ್ಯವನ್ನು ಸೂಚಿಸಿರುವರು.

## ಭಕ್ತಿ

ಭಗವತ್ಪ್ರಾಪ್ತಿಗೆ ಭಕ್ತಿ ಸುಲಭಸಾಧನೆ. ಭಕ್ತಿಯು ಭಗವಂತನ ಮಹಾಮಹಿಮೆಯ ಪರಿಚಯದಿಂದುಂಟಾಗುವುದು. ಭಗವಂತನ ಮಹಿಮೆಯಾದರೂ ಶ್ರುತಿ - ಸ್ಮೃತಿ - ಪುರಾಣ - ಬ್ರಹ್ಮಸೂತ್ರಾದಿ ವೇದಾಂತ ಗ್ರಂಥಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಈ ಎಲ್ಲಾ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದು ಶ್ರೀ ಸಾಮಾನ್ಯರಿಗೆ ನಿಲುಕದವುಗಳಾಗಿವೆ.

## ಹರಿದಾಸ ಸಾಹಿತ್ಯ

ಕರುಣಾಳುಗಳಾದ ದೇವತೆಗಳು ಭಗವಂತನಿಂದ ಆಜ್ಞಪ್ತರಾಗಿ, ಭೂಮಿಯಲ್ಲಿ ಅವತರಿಸಿ, ಆಚಾರ್ಯ ಮಧ್ವರ ಸತ್ಸಿದ್ಧಾಂತಗಳನ್ನೂ, ಪ್ರಮೇಯಗಳನ್ನೂ ಕನ್ನಡದಲ್ಲಿ ಹಾಡಿ ಸಕಲ ಸಾತ್ವೀಕರಿಗೂ ಮೋಕ್ಷಪಥವನ್ನು ತೋರಿಕೊಟ್ಟರು. ಕನ್ನಡ ಭಾಷೆಯಲ್ಲಿ ರಚಿತವಾದ ಹರಿದಾಸವಾಣಿ ಆರ್ಷವಾಣಿಯಾಗಿದೆ. ಸುಜೀವಿಯಲ್ಲಿ ದಿವ್ಯಜ್ಞಾನವನ್ನು ಬೆಳಸಿ, ಭಕ್ತಿಯ ಪ್ರವಾಹವನ್ನು ಹರಿಸುವುದು. ಸಂಸ್ಕೃತ ಜ್ಞಾನವಿಲ್ಲದ ವ್ಯಕ್ತಿಗೆ ಹರಿದಾಸಸಾಹಿತ್ಯದ ಅಧ್ಯಯನ - ಮನನಾದಿಗಳು ಜ್ಞಾನ - ವೈರಾಗ್ಯ - ಭಕ್ತಿಗಳನ್ನು ಯಥಾಯೋಗ್ಯವಾಗಿ ತಂದುಕೊಡಲು ಸಮರ್ಥವಾಗಿವೆ. ಹರಿದಾಸರ ಪ್ರತಿಕೃತಿಗಳಲ್ಲೂ ಆಚಾರ್ಯರ ಸತ್ಸಿದ್ಧಾಂತವು ವಿರಾಡ್ರೂಪವನ್ನು ತಾಳಿ ನಿಂತಿದೆ. ಈ ಕಲುಷಿತವಾತಾವರಣದಲ್ಲಿ ಜೀವನವನ್ನು ಧನ್ಯಮಾಡಿಕೊಳ್ಳಲು ಸಂಸ್ಕೃತ ಭಾಷೆಯಿಂದ ದೂರಾದ ಪ್ರತಿಸಾಧಕನಿಗೆ ಹರಿದಾಸ ಸಾಹಿತ್ಯವು ದಾರಿದೀಪವಾಗಿದೆ. "ಹರಿದಾಸರೇ ಗತಿಯು ನಮಗೆ".

# ಭಜನೆ

ವಿದ್ಯಾರ್ಜನೆ ಅಕ್ಷರಾಭ್ಯಾಸದಿಂದ ಪ್ರಾರಂಭವಾಗಿ ಹಂತಹಂತವಾಗಿ ಬೆಳೆದು ಕೊನೆಗೆ ಒಂದು ಮಟ್ಟವನ್ನು ಮುಟ್ಟುವುದು. ಮೋಕ್ಷಸಾಧನೆ ಭಜನೆಯಿಂದ ಪ್ರಾರಂಭವಾಗುವುದು. ಜ್ಞಾನವೈರಾಗ್ಯ ಭಕ್ತಿಗಳನ್ನು ಹಂತಹಂತವಾಗಿ ಬೆಳೆಸುವುದು. ಮೋಕ್ಷ ಪ್ರಾಪ್ತಿಗೆ ಹರಿದಾಸರು ತೋರಿಕೊಟ್ಟ ಭಜನಾಪದ್ಧತಿ ಮೊದಲನೆಯ ಮೆಟ್ಟಲಾಗಿದೆ. ಇದನ್ನು ನಿಷ್ಠೆಯಿಂದ ನಿತ್ಯದಲ್ಲಿ ಮಾಡಬೇಕು. ಇದರಿಂದ ಕರುಣಾಮಯನಾದ ಭಗವಂತನು ತಾನಾಗಿಯೇ ಒಲಿಯುವನು. ಪ್ರಮೇಯ ಪುಂಜಗಳೆನಿಸಿದ ಹರಿಕಥಾಮೃತಸಾರ ಹಾಗೂ ಸುಳಾದಿಗಳ ನಿಜತತ್ತ್ವಗಳನ್ನು ತಿಳಿಸಿಕೊಡುವನು. ಕೊನೆಗೆ ಪೂರ್ಣಬೋಧರ ಮೂಲಮೂವತ್ತೇಳು ಗ್ರಂಥಗಳಲ್ಲಿ ಅಡಕವಾದ ದಿವ್ಯಜ್ಞಾನವನ್ನು ತಂದುಕೊಡುವನು. ಕಾರಣ, "ಹರಿ ಭಜನೆ ಮಾಡೋ ನಿರಂತರ ಪರಗತಿಗಿದು ನಿರ್ಧಾರ" ಎಂಬುವ ಹರಿದಾಸರ ವಾಣಿ ನಮಗೆ ಸದಾ ತಾರಕ.

# ತಾರತಮ್ಯ

ಪೂರ್ಣಪ್ರಜ್ಞರು ಪಂಚಭೇದ ತಾರತಮ್ಯಕ್ಕೆ ಹೆಚ್ಚು ಒತ್ತು ಕೊಟ್ಟಿರುವರು. ಹರಿಸರ್ವೋತ್ತಮತ್ವ ಜ್ಞಾನವು ಎಷ್ಟು ಅತ್ಯಾವಶ್ಯಕವೋ, ಪಂಚಭೇದ ತಾರತಮ್ಯದ ಜ್ಞಾನವು ಸಹ ಅಷ್ಟೇ ಅತ್ಯಾವಶ್ಯಕವಾದುದು. ಆಚಾರ್ಯರು ತಮ್ಮ ತಾತ್ಪರ್ಯನಿರ್ಣಯದಲ್ಲಿ--

ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ
ಏತದ್ವಿನಾ ನಕಸ್ಯಾಪಿ ವಿಮುಕ್ತಿಃಸ್ಯಾತ್ ಕಥಂಚ ನ
ಪಂಚ ಭೇದಾಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ
ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿಃ ನಚಾನ್ಯಥಾ

ಎಂದು ಹೇಳಿ ಇದನ್ನು ಸ್ಪಷ್ಟಪಡಿಸಿರುವರು. ಅಣುಭಾಷ್ಯದಲ್ಲೂ ಸಹ "ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ" ಎಂದು ಹೇಳಿ ಮೇಲಿನ ವಿಷಯವನ್ನೇ ಸಮರ್ಥಿಸಿರುವರು. ಹರಿದಾಸರೆಲ್ಲರೂ ಮುಕ್ತ ಕಂಠದಿಂದ ಈ ವಿಷಯವನ್ನು ಒತ್ತಿ ಹೇಳುತ್ತಾ--

ಎಂದೆಂದು ಮುಕುತಿಯ ಬೇಕೆಂದವರ್ಗೆ
ಅಂದದಿ ಜೀವರ ತಾರತಮ್ಯವ ತಿಳಿವುದು
ಗುರು ಪುರಂದರ ವಿಠಲ ಮುಕುತಿಯ ನೀವ

(ಗುರುಪುರಂದರದಾಸರು)

ತಾರತಮ್ಯವೇ ತಿಳಿದು ನಡೆದಾವಿಶಿಷ್ಟರಿಗೆ
ಪಾರುಮಾಡುವ ವತ್ಸ ವಿಜಯ ವಿಠಲರೇಯ

(ವಿಜಯದಾಸರು)

ದೇವ ದೈತ್ಯರ ತಾರತಮ್ಯವ ನೀ ವಿಧದಿ ತಿಳಿದೆಲ್ಲರೊಳು ಲ-
ಕ್ಷ್ಮೀವರನೆ ಸರ್ವೋತ್ತಮನು ಎಂದರಿದು ನಿತ್ಯದಲಿ
ಸೇವಿಸುವ ಭಕ್ತರಿಗೊಲಿದು ಸುಖವೀವ ಸರ್ವತ್ರದಲಿ ಸುಖಮಯ
ಶ್ರೀ ವಿರಿಂಚಾದ್ಯಮರನುತ ಜಗನ್ನಾಥ ವಿಠಲನು

(ಜಗನ್ನಾಥದಾಸರು) (29-16)

ಎಂದು ವಿವರಿಸಿರುವರು.

ಹರಿದಾಸರೆಲ್ಲರು ಆಚಾರ್ಯ ಮಧ್ವರು ತೋರಿಕೊಟ್ಟ ತಾರತಮ್ಯಕ್ಕನುಗುಣವಾಗಿ ಕೃತಿಗಳನ್ನು ರಚಿಸಿರುವರು. ಉಪಲಬ್ಧವಿರುವ ಪ್ರಾಚೀನ ಹರಿದಾಸರ ಸಾಹಿತ್ಯವನ್ನು ಪರಿಶೀಲಿಸಿದಾಗ, ಮೊಟ್ಟಮೊದಲು ಸಂಕ್ಷೇಪರೂಪದಲ್ಲಿ ತಾರತಮ್ಯಾತ್ಮಕವಾದ ಭಜನಾಪದ್ಧತಿಯು ಪುರಂದರದಾಸರ ಕೃತಿಗಳಿಂದ ಉಪಲಬ್ಧವಾಗುತ್ತದೆ. ಅವು--

"ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ"
"ಸತ್ಯಂ ಜಗಕಿದು ಪಂಚ ಭೇದವು ನಿತ್ಯ ಶ್ರೀ ಗೋವಿಂದನ"

ಈ ಎರಡು ಕೃತಿಗಳು ಹಿಂದಿನಿಂದಲೂ ಭಜನೆಯ ಪ್ರಾರಂಭದಲ್ಲಿ ಬಳಕೆಗೆ ಬಂದಿವೆ.

## ಹರಿದಾಸರ ಆಶ್ವಾಸನೆ

ಪುರಂದರದಾಸರು ಭಜನಾ ಪದ್ಧತಿಯನ್ನು ತೋರುವುದರೊಟ್ಟಿಗೆ, ಭಜನೆಯಲ್ಲಿ ಭಾಗವಹಿಸುವ ವ್ಯಕ್ತಿಯು ಅನುಸರಿಸಬೇಕಾದ ನಿಯಮಗಳನ್ನು ಸಹ ತಿಳಿಯಹೇಳಿರುವರು.

ತಂಬೂರಿ ಮೀಟಿದವ ಭವಸಮುದ್ರವ ದಾಟಿದವ
ತಾಳವ ತಟ್ಟಿದವ ಸುರರೊಳು ಸೇರಿದವ
ಗೆಜ್ಜೆಯ ಕಟ್ಟಿದವ ಖಳರೆದೆಯ ಮೆಟ್ಟಿದವ
ಗಾನವ ಮಾಡಿದವ ವಿಠಲನ್ನ ನೋಡಿದವ
ಪುರಂದರವಿಠಲನ್ನ ನೋಡಿದವ ವೈಕುಂಠಕ್ಕೆ ಓಡಿದವ

ಈ ಉಗಾಭೋಗದಲ್ಲಿ ದಾಸರು ಭಜನೆಯಲ್ಲಿ ಪಾಲ್ಗೊಳ್ಳುವ ವ್ಯಕ್ತಿ ಕೈಯ್ಯಲ್ಲಿ ತಾಳವನ್ನು ಹಿಡಿದು, ಕಾಲಿಗೆ ಗೆಜ್ಜೆಕಟ್ಟಿ, ತಂಬೂರಿ ಮೀಟುತ್ತಾ, ಮೈಮರೆತು ಭಕ್ತಿಪೂರ್ವಕ ಭಜನೆ ಮಾಡಬೇಕೆಂದು ಸೂಚಿಸಿರುವರು. ಭಜನೆಗೆ ರಾಗ-ತಾಳಗಳ ಜ್ಞಾನ ಅತ್ಯಾವಶ್ಯಕ. ಇದು ಸಾಧನೆಯಿಂದ ಸಿದ್ಧಿಸುವುದು. ರಾಗ-ತಾಳಗಳ ಜ್ಞಾನವಿಲ್ಲವೆಂದು ಯಾರೂ ನಿರುತ್ಸಾಹಿಗಳಾಗಬೇಕಾಗಿಲ್ಲ. ದಾಸರ ಆಶ್ವಾಸನೆ ಸದಾ ನಮಗೆ ಬೆಂಬಲವಾಗಿದೆ.

ತಾಳನೋ ಹರಿ ಕೇಳನೋ ರಾಗ-
ತಾಳಗಳಿದ್ದು ಪ್ರೇಮವಿಲ್ಲದ ಜ್ಞಾನ

ಭಜನೆಗೆ ಮುಖ್ಯವಾದ ಅಂಗ ಭಕ್ತಿ. ರಾಗ, ತಾಳ, ಗೆಜ್ಜೆ, ತಂಬೂರಿ ಮುಂತಾದ ವಾದ್ಯೋಪಕರಣಗಳು ನಂತರದ ಸಾಧನೆಗಳು.

ಭಗವಂತನು ಭಕ್ತನಲ್ಲಿ ತೋರುವ ಕರುಣೆ ತಾಯಿಯ ಕರುಣೆಗಿಂತಲೂ ಮಿಗಿಲಾದುದು. ಬಾಲಕನ ಕಲಭಾಷೆಯನ್ನು ಜನನಿಯು ಕೇಳಿ ಸುಖಪಡುವಂತೆ, ಲಕ್ಷ್ಮೀಲೋಲ ಭಕ್ತರು ಮಾಡುವ ಸಂಸ್ತುತಿಗೆ ಹಿಗ್ಗುವನು. ತುಂಬುರು ನಾರದರ ಸುಸ್ವರ ಗಾನವನ್ನು ಕೇಳುವ ಶ್ರೀಹರಿಗೆ ನಮ್ಮ ಭಜನೆ ಮಕ್ಕಳ ತೊದಲು ನುಡಿಗೆ ಸಮವಾದುದು. ಲೋಕದ ಎಲ್ಲಾ ತಾಯಿಯರು ತಮ್ಮ ಮಕ್ಕಳ ತೊದಲು ನುಡಿಗೆ ಹಿಗ್ಗುವರಲ್ಲದೆ ಕೋಪಿಸಿಕೊಳ್ಳರು. ಕಾರಣ ಮೊಟ್ಟಮೊದಲು ಭಕ್ತಿಯಿಂದ ಭಜನೆ ಮಾಡಲು ಕಲಿಯಬೇಕು. ನಂತರ ರಾಗ - ತಾಳಗಳ ಯತ್ನ.

## ಬಾಹ್ಯಾಂತರ ಶುದ್ಧಿ

ಭಕ್ತಿಗೆ ನಿರ್ಮಲವಾದ ಮನಸ್ಸು ತಾಣವೆನಿಸುವುದು. ಮನಸಿನ ನೈರ್ಮಲ್ಯ ಬಾಹ್ಯ ಶುದ್ಧಿಯಿಂದ ಮಾತ್ರ ಸಾಧ್ಯ. ಈ ಬಾಹ್ಯಶುದ್ಧಿಯಾದರೂ ಸ್ನಾನ, ಶುದ್ಧವಸ್ತ್ರಗಳ ಧಾರಣೆ ಭಗವದರ್ಪಿತ ಶುದ್ಧ ಆಹಾರ ಸೇವನೆ ಇವುಗಳಿಂದ ಸಿದ್ಧಿಸುವುದು. ಇಂತಹ ಶುದ್ಧ ಆಚರಣೆಯಿಂದ ಬೆಳೆದು ಬಂದ ಭಕ್ತಿ ಧೃಢವಾಗಿ ನಿಂತು, ಜೀವನದ ಧನ್ಯತೆಗೆ ಕಾರಣವಾಗುವುದು.

ಆದಕಾರಣ ಶ್ರೀನಿವಾಸನ ಕರುಣೆ ಪಡೆಯಲು ಎಲ್ಲರು ಹರಿದಾಸರು ತೋರಿಕೊಟ್ಟ ಪದ್ಧತಿಯಲ್ಲಿ ಬಾಹ್ಯಾಂತಃಕರಣ ಶುದ್ಧಿವುಳ್ಳವರಾಗಿ, ಭಕ್ತಿಯಿಂದ ನಿತ್ಯದಲ್ಲೂ ಭಜನೆಮಾಡಿ ಭಾಗ್ಯಶಾಲಿಗಳಾಗಬೇಕು. ಇದರಿಂದ ಮಾನವ ಜನ್ಮ ಬಂದುದಕ್ಕೆ ಸಾರ್ಥಕತೆ ದೊರೆಯುವುದು.

# ದಾಸರು ತೋರಿದ ನಿಯಮಾವಳಿ

1. ಭಜನೆ ಮಾಡುವ ವ್ಯಕ್ತಿ ಅರುಣೋದಯದಲ್ಲಿ ಏಳಬೇಕು.

2. ಶೌಚಾದಿ ಕಾರ್ಯಗಳನ್ನು ಮುಗಿಸಿ, ಹಲ್ಲುಜ್ಜಿ, ಅನುಕೂಲವಾದಲ್ಲಿ ಸ್ನಾನ ಮಾಡಬೇಕು.

3. ಅಥವಾ ಮುಖವನ್ನು ತೊಳೆದು ಹಣೆಗೆ ತುಲಸೀ ಮೃತ್ತಿಕೆಯನ್ನು ಧರಿಸಿ ಭಜನೆ ಮಾಡಬೇಕು.

4. ಆಶ್ರಮಕ್ಕನುಗುಣವಾಗಿ ಶುಭ್ರ ವಸ್ತ್ರಗಳನ್ನು ಧರಿಸಬೇಕು.

5. ವಿಷ್ಣುಪ್ರೀತಿಕರವಾದ ತುಲಸೀಮಾಲೆಯನ್ನು ಕೊರಳಲ್ಲಿ ಧರಿಸಬೇಕು.

6. ಸ್ನಾನಮಾಡಿದಲ್ಲಿ ಗೋಪೀಚಂದನದಿಂದ ಉರ್ಧ್ವಪುಂಢ್ರಗಳನ್ನೂ, ಪಂಚಮುದ್ರೆಗಳನ್ನು ಧರಿಸಬೇಕು.

7. ಸಾಯಂಕಾಲದ ಭಜನೆಯಲ್ಲಿ ಹಣೆಗೆ ಗಂಧ, ಅಕ್ಷತೆ - ಅಂಗಾರಗಳನ್ನು ಧರಿಸಬೇಕು.

8. ವೈರಾಗ್ಯಕ್ಕೆ ಪ್ರತಿರೂಪವೂ, ವೈರಾಗ್ಯವನ್ನು ಬೆಳೆಸುವುದೂ ಆದ ಕಾವೀವಸ್ತ್ರವನ್ನು ತಲೆಗೆ ಸುತ್ತಿಕೊಳ್ಳಬೇಕು.

9. ಮನಸ್ಸನ್ನು ಎಚ್ಚರಗೊಳಿಸಿ, ಪ್ರಾಪಂಚಿಕ ಶಬ್ದಗಳನ್ನು ಕಿವಿಗೆ ಕೇಳಿಸದಂತೆ ಮಾಡುವ, ಭಜನೋಪಕರಣಗಳೆನಿಸಿದ ತಾಳ, ಗೆಜ್ಜೆ, ತಂಬೂರಿ, ಢಕ್ಕಿ, ಚಿಟಿಕೆ ಮುಂತಾದವುಗಳಲ್ಲಿ ಯಾವುದಾದರೂ ಒಂದನ್ನು ಕೈಯ್ಯಲ್ಲಿ ಧರಿಸಿ ಭಜನೆ ಮಾಡಬೇಕು.

10. ಆದಷ್ಟು ಪ್ರಯತ್ನಿಸಿ ಆಹಾರ ಮತ್ತು ಪಾನೀಯಗಳತ್ತ ಮನಸ್ಸನ್ನು ಹೋಗಗೊಡದೆ ನಿಶ್ಚಲಗೊಳಿಸಬೇಕು.

11. ಭಜನಾಕಾರ್ಯಕ್ರಮವನ್ನು ದೇವಾಲಯದಲ್ಲಾಗಲಿ ಅಥವಾ ಮನೆಯಲ್ಲಿ ದೇವತಾಸನ್ನಿಧಾನದಲ್ಲಾಗಲಿ ನಿರ್ವಹಿಸಬೇಕು.

12. ಭಜನೆಯಲ್ಲಿ ಪುರಂದರದಾಸರ ಪರಂಪರೆಗೆ ಸೇರಿದ ಹರಿದಾಸರ ಕೃತಿಗಳನ್ನೇ ಹಾಡಬೇಕು.

13. ಭಜನೆಯಲ್ಲಿ ಆದಷ್ಟು ಪ್ರಯತ್ನಿಸಿ ಪರಂಪರಾಗತವಾದ ರಾಗ-ತಾಳಗಳನ್ನೇ ಹಾಡುಗಳಿಗೆ ಬಳಸಬೇಕು. ಸಂಪ್ರದಾಯ ಬದ್ಧವಾದ ರಾಗ ಇದ್ದಾಗ್ಯೂ ಅದನ್ನು ಬಿಟ್ಟು

ಹೊಸರಾಗಗಳನ್ನು ಸರ್ವೋತ್ಕೃಷ್ಟಗಳೆನಿಸಿದ ಶ್ರುತಿ - ಸ್ಮೃತಿ - ಪುರಾಣ ರಹಸ್ಯಗಳನ್ನು ತಮ್ಮೊಳಗಿಟ್ಟುಕೊಂಡು ಮಂತ್ರಸದೃಶಗಳೆನಿಸಿದ ಹರಿದಾಸರ ಕೃತಿಗಳಿಗೆ ಹಾಕಬಾರದು.

14. ಸುಹಾಸಿನಿಯರು ಭಜನೆ ಮಾಡುವಾಗ ಕಡ್ಡಾಯವಾಗಿ ಕಚ್ಚೆ ಹಾಕಿಕೊಳ್ಳ ಬೇಕು.

15. ಸಾಮೂಹಿಕ ಭಜನೆಯಲ್ಲಿ ಲೋಕವಾರ್ತೆಗೆ ಅವಕಾಶಕೊಡಬಾರದು.

16. ಸಿಸ್ತಾದ ಕ್ರಮದಲ್ಲಿ ಕುಳಿತು ಭಜನೆ ಮಾಡಬೇಕು.

ಹರಿದಾಸರು ತೋರಿದ ಈ ನಿಯಮಗಳನ್ನು ಅನುಸರಿಸಿ ಭಜನೆ ಮಾಡಿದಾಗ ಮನಸ್ಸು ನಿರ್ಮಲವಾಗಿ ಜ್ಞಾನ-ಭಕ್ತಿ ವೈರಾಗ್ಯಗಳು ಯಥಾಯೋಗ್ಯವಾಗಿ ಸಿದ್ಧಿಸುವವು. ಶುದ್ಧ ಆಚರಣೆ ವ್ಯಕ್ತಿಯನ್ನು ಪವಿತ್ರಗೊಳಿಸುವುದರೊಟ್ಟಿಗೆ ಅವನ ಸುತ್ತಲಿನ ವಾತಾವರ ಣವನ್ನು ಸಹ ಶುದ್ಧಗೊಳಿಸಿ ಸಮಾಜದ ಸುಧಾರಣೆಗೆ ಕಾರಣವಾಗುವುದು.

## ಭಜನೆಯ ಪ್ರಕಾರಗಳು

ಭಗವಂತನಿಗೂ ಹಾಗೂ ಅವನ ಭಕ್ತರಿಗೂ ಸಾಧಕನು ಅರ್ಪಿಸುವ ಸೇವೆಯೇ **ಭಜನೆ** ಎನಿಸುವುದು. ಇದು ಮೂರು ವಿಧವಲ್ಲಿದೆ.

1. ಸುಪ್ರಭಾತ ಭಜನೆ.
2. ಅವರೋಹಣಾತ್ಮಕ ಪ್ರಾತಃಕಾಲ ಭಜನೆ.
3. ಆರೋಹಣಾತ್ಮಕ ರಾತ್ರಿಭಜನೆ.

## ಸುಪ್ರಭಾತ

ಆನಂದತೀರ್ಥ ಭಗವತ್ಪಾದರು ಪರಬ್ರಹ್ಮನೆನಿಸಿದ ನಾರಾಯಣನನ್ನು ಅನಂತ ಕಲ್ಯಾಣಗುಣಪೂರ್ಣನನ್ನಾಗಿ ಹೇಳಿರುವರು. "ನಾರಾಯಣಂ ಗುಣೈಃ ಸರ್ವೈಃ ಉದೀರ್ಣಂ". ಭಗವಂತನ ಉಪಾಸನೆಗೆ ಗುಣಪೂರ್ಣತ್ವದ ಜ್ಞಾನಮಾತ್ರ ಸಾಕಾಗಲಾ ರದು. ಅವನು ದೋಷಗಳಿಂದಲೂ ದೂರ ಎನ್ನುವ ಜ್ಞಾನವೂ ಅತ್ಯಾವಶ್ಯಕ. ಅನಂತ ದೋಷಗಳಲ್ಲಿ ನಿದ್ರೆಯು ಸಹ ಒಂದು ದೋಷವಾಗಿರುವುದು.

ದೋಷದೂರನಾದ ಭಗವಂತ ನಿದ್ರಿಸುವನೆಂದು ರಾತ್ರಿಯ ಭಜನೆಯ ಕಾಲದಲ್ಲಿ ಲಾಲಿಹಾಡುವುದೂ, ಉಷಃಕಾಲದಲ್ಲಿ ಎಬ್ಬಿಸುವುದಕ್ಕಾಗಿ ಸುಪ್ರಭಾತ ಹಾಡುವುದೂ, ಈ ಎರಡೂ ಭಗವಂತನಲ್ಲಿ ದೋಷಾರೋಪಣೆಯೇ ಆಗುವವು. ಸುಪ್ರಭಾತಸೇವೆ ಭಗವಂತನನ್ನು ಎಬ್ಬಿಸುವುದಕ್ಕಾಗಿ ಅಲ್ಲ. "ಓ ಭಗವಾನ್ ಪ್ರತಿದಿನದಲ್ಲೂ ಅರುಣೋ

ದಯವಾಗುವುದು. ನನ್ನ ಹೃದಂತರಾಳದಲ್ಲಿ ನಿನ್ನ ವಿಷಯಕ ಪ್ರೇಮದ ಅರುಣೋದಯವು ಎಂದಿಗಾಗುವುದು? ಸುಷುಪ್ತಿ-ಸ್ವಪ್ನ- ಜಾಗ್ರದವಸ್ಥೆಗಳಿಗೆ ಕಾರಣನಾದ, ಪ್ರಾಜ್ಞ - ತೈಜಸ - ವಿಶ್ವಾಭಿನ್ನನಾದ ನಾರಾಯಣಾ! ಅಜ್ಞಾನವೆಂಬ ಕತ್ತಲೆಯಿಂದ ತುಂಬಿದ ನನ್ನ ಹೃದಯದಲ್ಲಿ ಜ್ಞಾನ ಜ್ಯೋತಿಯನ್ನು ಬೆಳಗಿಸಿ ಭಕ್ತಿಯ ಅರುಣ ಕಿರಣಗಳನ್ನು ಚೆಲ್ಲಲು ಅನುಗ್ರಹೋನ್ಮುಖನಾಗು; ಇದಕ್ಕಾಗಿ ಏಳು" ಎಂಬ ಈ ಪ್ರಾರ್ಥನೆಯೇ ಸುಪ್ರಭಾತದ ಹಿನ್ನೆಲೆ; ನಿಜಾರ್ಥ. ಈ ಭಾವವನ್ನೇ ಆದಿ ಕವಿವಾಲ್ಮೀಕಿ ತನ್ನ ಅಮೃತಮಯ ವಾಣಿ ಎನಿಸಿದ ರಾಮಾಯಣದಲ್ಲಿ--

"ಕೌಸಲ್ಯಾಸುಪ್ರಜಾ ರಾಮಾ ಪೂರ್ವಾ ಸಂಧ್ಯಾ ಪ್ರವರ್ತತೇ |
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ||

ಎಂದು ಹಾಡಿರುವನು. "ಪುರುಷೋತ್ತಮನಾದ ಓ ರಾಮಾ ! ನಿನ್ನ ಅನುಗ್ರಹದಿಂದ ನನ್ನ ಹೃದಯದಲ್ಲಿ ಪೂರ್ವ ಸಂಧ್ಯೆಯಂತಿರುವ ಭಕ್ತಿಯು ಪ್ರಾರಂಭವಾಗಿದೆ. ಬೆಳಕಿನಿಂದ ತುಂಬಿದ ಹಗಲಿನಂತಿರುವ ಜ್ಞಾನಮಯವಾದ ನನ್ನ ಮುಂದಿನ ಜೀವನದಲ್ಲಿ ನಿನಗೆ ಸಂಬಂಧಿಸಿದ ಸತ್ಕರ್ಮಗಳನ್ನು ನೀನು ಮಾಡಿ ಮಾಡಿಸು. ಇದಕ್ಕಾಗಿ ಏಳು; ಉದ್ಧರಿಸು". ಇದನ್ನೇ ಪುರಂದರ ದಾಸರು ಸಹ--

"ಏಳು ನಾರಾಯಣ ಏಳು ಲಕ್ಷ್ಮೀರಮಣ ಏಳು ಶ್ರೀಗಿರಿಯೊಡೆಯ ವೇಕಟೇಶಾ
ಶೇಷಶಯನನೆ ಏಳು ಸಮುದ್ರಮಥನವ ಮಾಡು ದೇಶ ಕೆಂಪಾಯಿತೇಳಯ್ಯ ಹರಿಯೇ

.........................................................

ಅರವಿಂದಲೋಚನ ಕೋಳಿ ಕೂಗಿತು ಕೇಳು"

ಎಂಬ ಕೃತಿಯಲ್ಲಿ ಪ್ರತಿಶಬ್ದದಿಂದಲೂ ಈ ಭಾವವನ್ನೇ ಸ್ಪಷ್ಟಪಡಿಸಿರುವರು. (ಈ ಕೃತಿಯ ಸ್ವಾರಸ್ಯವನ್ನು ಬನ್ನಂಜೆಯವರ ಪುರಂದರೋಪನಿಷತ್ ಗ್ರಂಥದಲ್ಲಿ ವಿಸ್ತಾರವಾಗಿ ಕಾಣಬಹುದು.) ಆದಕಾರಣ ಸುಪ್ರಭಾತದ ಸೇವೆಯಲ್ಲಿ ಈ ಎಚ್ಚರಿಕೆ ಸಾತ್ವಿಕರಿಗೆ ಸದಾ ಇರಬೇಕು.

## ಸುಪ್ರಭಾತ ಭಜನೆಯ ಕ್ರಮ

ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಶ್ರೀಹರಿಗೆ ಸುಪ್ರಭಾತವನ್ನು ನೇರವಾಗಿ ನಾವೇ ಹಾಡಬಾರದು. ಮೊಟ್ಟಮೊದಲು ಆರೋಹಣಕ್ರಮದಲ್ಲಿ ನೀತಗುರುಗಳಿಗೆ ಸುಪ್ರಭಾತ ಹಾಡಿ, ನಂತರ ತಾರತಮ್ಯಪ್ರಕಾರ ಎಲ್ಲ ಹರಿದಾಸರಿಗೂ, ಎಲ್ಲ ಗುರು

ಗಳಿಗೂ, ಎಲ್ಲಾ ದೇವತೆಗಳಿಗೂ ಸುಪ್ರಭಾತವನ್ನು ಹಾಡಬೇಕು. ಈ ಸಂದರ್ಭದಲ್ಲಿ ಸಾಧಕನು "ನಾನು ಶ್ರೀಹರಿಗೆ ಸುಪ್ರಭಾತಸೇವೆಯನ್ನು ಸಲ್ಲಿಸುತ್ತಿರುವೆನೆಂದು" ಚಿಂತಿಸಬಾರದು. ಜೀವೋತ್ತಮರಾದ ಬ್ರಹ್ಮವಾಯುಗಳು ಸತೀಸಮೇತರಾಗಿ, ವಿನಮ್ರರಾಗಿ, ಭಕ್ತಿಭಾವದಿಂದ, ತಾಳಗಳನ್ನು ಹಿಡಿದು, ಕಾಲಿಗೆ ಗೆಜ್ಜೆ ಕಟ್ಟಿ, ಪರವಶರಾಗಿ ನರ್ತನಮಾಡುತ್ತಾ, ದೇವತೆಗಳ, ಯತಿಗಳ, ಹರಿದಾಸರ ಬೃಂದದಿಂದ ಪರಿವೇಷ್ಠಿತರಾಗಿ ಸ್ವಾಮಿಗೆ ಸುಪ್ರಭಾತಸೇವೆಯನ್ನು ಸಲ್ಲಿಸುತ್ತಿರುವರೆಂದು ಚಿಂತಿಸಬೇಕು. ಇದರಿಂದ ನಾನು ಎಂಬ ಅಹಂಕಾರವು ದೂರವಾಗಿ ವಿನಯವು ಎದ್ದು ನಿಲ್ಲುವುದು. ಇದೊಂದು ಶಿಷ್ಟ ಸಂಪ್ರದಾಯದಿಂದ ನಡೆದು ಬಂದ ಸುಪ್ರಭಾತ ಸೇವೆಯ ಕ್ರಮ.

ಈ ಸಂಪ್ರದಾಯದ ಪ್ರಕಾರ ಮೊಟ್ಟಮೊದಲು ತಮ್ಮ ತಮ್ಮ ಗುರುಗಳಿಗೂ, ನಂತರ ಪರಮಗುರುಗಳಿಗೂ ಸುಪ್ರಭಾತವನ್ನು ಹಾಡಿ, ನಂತರ ಆರೋಹಣಾಕ್ರಮದಲ್ಲಿ ಸಕಲ ಹರಿದಾಸರಿಗೂ, ತದನಂತರ ಸಕಲ ಯತಿವರೇಣ್ಯರಿಗೂ, ನಂತರ ಸಕಲ ಸಾತ್ವಿಕ ದೇವತೆಗಳಿಗೂ ಕೊನೆಯಲ್ಲಿ ನಾರಾಯಣನಿಗೂ ಸುಪ್ರಭಾತವನ್ನು ಹೇಳಬೇಕು.

ಎಲ್ಲ ಹರಿದಾಸರಿಗೆ, ಯತಿಗಳಿಗೆ, ದೇವತೆಗಳಿಗೆ ಸಂಬಂಧಿಸಿದ ಸುಪ್ರಭಾತದ ಕೃತಿಗಳು (ಉದಯರಾಗದ ಹಾಡುಗಳು) ಇಂದು ಉಪಲಬ್ಧವಿಲ್ಲ. ಬೆರಳೆಣಿಕೆಯಲ್ಲಿ ಯತಿಗಳಿಗೆ, ದೇವತೆಗಳಿಗೆ ಸಂಬಂಧಿಸಿದ ಸುಪ್ರಭಾತ ಕೃತಿಗಳು ದೊರೆಯುತ್ತಿವೆ. ಕಾರಣ ಸುಪ್ರಭಾತದ ಕೃತಿ ದೊರೆಯದೇ ಇದ್ದಾಗ ಆಯಾ ಮಹಾತ್ಮರಿಗೆ ಸಂಬಂಧಿಸಿದ ಶ್ಲೋಕವನ್ನಾಗಲಿ, ಪದ್ಯವನ್ನಾಗಲಿ, ಕೊನೆಗೆ ಅವರ ನಾಮವನ್ನಾಗಲಿ ಹೇಳಿ ಅವರಿಗೆ ಸುಪ್ರಭಾತಸೇವೆಯನ್ನು ಸಲ್ಲಿಸಬೇಕು.

ಉದಾಹರಣೆಗೆ - ಪುರಂದರದಾಸರಿಗೆ ಸಂಬಂಧಿಸಿದ ಉದಯರಾಗದ ಹಾಡು ಇಂದು ಉಪಲಬ್ಧವಿಲ್ಲ. ಇದರಿಂದಾಗಿ--

"ಮನ್ಮನೋಽಭೀಷ್ಟ ವರದಂ ಸರ್ವಾಭೀಷ್ಟ ಫಲಪ್ರದಂ
ಪುರಂದರಗುರುಂ ವಂದೇ ದಾಸಶ್ರೇಷ್ಠಂದಯಾನಿಧಿಂ"

ಎಂಬ ಶ್ಲೋಕವನ್ನು ಹೇಳಿ--

"ಶ್ರೀ ಪುರಂದರ ದಾಸಗುರವೇ ನಮಃ. ತವ ಸುಪ್ರಭಾತಂ".

"ಶ್ರೀ ಪುರಂದರ ದಾಸರೇ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ". ಎಂದು ಹೇಳಬೇಕು. ಶ್ಲೋಕವೂ ಸಹ ದೊರೆಯದೇ ಇದ್ದಾಗ ಮಹಿತಾತ್ಮರ ನಾಮಸಂಕೀರ್ತನೆ ಮಾಡಿ ಸುಪ್ರಭಾತವನ್ನು ಹೇಳಬೇಕು. ಉದಾಹರಣೆಗೆ--

"ಶ್ರೀ ಶ್ಯಾಮಸುಂದರ ದಾಸ ಗುರವೇ ನಮಃ ತವ ಸುಪ್ರಭಾತಂ" "ಶ್ರೀ ಶ್ಯಾಮ ಸುಂದರ ದಾಸರೇ ನಿಮಗೆ ಅನಂತ ನಮನಗಳು; ನಿಮಗೆ ಸುಪ್ರಭಾತವಾಗಲಿ" ಎಂದು ಹೇಳಬೇಕು.

ಮೇಲೆ ಹೇಳಿದ ಸಂಪ್ರದಾಯದಂತೆ ಇನ್ನೊಂದು ಸುಂದರವಾದ ಸಂಪ್ರದಾಯವೂ ಬಳಕೆಯಲ್ಲಿದೆ. ಈ ಎರಡನೆಯ ಸಂಪ್ರದಾಯದಲ್ಲಿ ಅವರೋಹಣಾಕ್ರಮವು ಅನುಸರಿಸಲ್ಪಟ್ಟಿದೆ. ಮೊಟ್ಟಮೊದಲು ಭಗವಂತನಿಗೆ ಸುಪ್ರಭಾತ, ನಂತರದಲ್ಲಿ ಈಶ ಕೋಟಿ ಪ್ರವಿಷ್ಟಳಾದ ರಮೆಗೆ ಸುಪ್ರಭಾತ, ತರುವಾಯ ಋಜುಗಳಿಗೆ, ನಂತರ ಯಥಾ ಕ್ರಮದಲ್ಲಿ ಅವರೋಹಣಾರೂಪದಲ್ಲಿ ಸಕಲ ಸಾತ್ವಿಕ ದೇವತೆಗಳಿಗೂ, ಗುರುಪರಂಪರೆಗೂ, ದಾಸಪರಂಪರೆಗೂ ಸುಪ್ರಭಾತ ಹೇಳಲಾಗುತ್ತದೆ. ಸಕಲ ಚೇತನ ಪ್ರಪಂಚಕ್ಕೆ ಜಾಗ್ರದವಸ್ಥೆಯನ್ನು ಕೊಡುವವನು ಸರ್ವತಂತ್ರ ಸ್ವತಂತ್ರನಾದ ಭಗವಂತನೊಬ್ಬನೆ. ಅವನಿಂದಲೇ ಎಲ್ಲರಿಗೂ ಎಚ್ಚರಿಕೆ. ಕಂಠದಲ್ಲಿ ಇದ್ದು ಸ್ವಪ್ನಾವಸ್ಥೆಯನ್ನು ಉಂಟುಮಾಡಿದ ತೈಜಸನೇ, ವಿಶ್ವನಿಂದ ಸೇರಿ ಕಣ್ಣಿಗೆ ಬಂದಾಗಲೇ ಎಲ್ಲರಿಗೂ ಬೆಳಗು ತೋರುವುದು. ಜೀವನ ಪೂರ್ಣ ಅಸ್ವಾತಂತ್ರ್ಯತೆ, ಭಗವಂತನ ಸರ್ವ ತಂತ್ರಸ್ವಾತಂತ್ರ್ಯತೆ ಈ ಸಂಪ್ರದಾಯದಲ್ಲಿ ಎದ್ದು ಕಾಣುವುದು. ಈ ಚಿಂತನೆ ಪ್ರತಿ ಜೀವಿಗೂ ಎದ್ದೊಡನೆ ಮೂಡಲೆಂದೇ ಜ್ಞಾನಿಗಳು ಈ ಎರಡನೇ ಸಂಪ್ರದಾಯವನ್ನು ತೋರಿಕೊಟ್ಟಿರುವರು.

"ಅಸ್ವಾತಂತ್ರ್ಯ ಚಿಂತಿಪುದಕಿಂತ ಮಿಗಿಲಾದ
ಸಾಧನ ಬಗೆ ನಾ ಕಾಣೆ ವಿಜಯವಿಠಲಾ"

ಎಂದು ನುಡಿದ ವಿಜಯದಾಸರ ವಾಕ್ಯ ಸದಾ ಸಂಸ್ಮರಣೀಯ. ಕಾರಣ ಸಾಧಕರು ಮೊದಲನೆಯ ಸಂಪ್ರದಾಯಕ್ಕನುಗುಣವಾಗಿ ಆರೋಹಣಾರೂಪದಲ್ಲಾಗಲಿ ಅಥವಾ ಎರಡನೇ ಸಂಪ್ರದಾಯಕ್ಕನುಗುಣವಾಗಿ ಅವರೋಹಣಾರೂಪದಲ್ಲಾಗಲಿ ಸುಪ್ರಭಾತದ ಸೇವೆಯನ್ನು ಸಮರ್ಪಿಸಬಹುದು. ಎರಡು ಮಾರ್ಗಗಳೂ ರಾಜಮಾರ್ಗಗಳು. ಜೀವಿಯನ್ನು ಭಗವಂತನ ಸನ್ನಿಧಿಗೆ ಸೇರಿಸುವ ಸುಮಾರ್ಗಗಳು.

## ಅವರೋಹಣಾಕ್ರಮದಲ್ಲಿ ಪ್ರಾತಃಕಾಲದ ಭಜನೆ

ಪ್ರಾತಃಕಾಲದಲ್ಲಿ ಭಜನೆಯನ್ನು ಅವರೋಹಣ ಕ್ರಮದಲ್ಲಿ ಮಾಡಬೇಕು. ಹರಿದಾಸಸಾಹಿತ್ಯವನ್ನು ಸಮಾಜಕ್ಕೆ ಹಂಚಿಕೊಟ್ಟ ದಾಸಸಾಹಿತ್ಯದ ರಸ ಋಷಿಗಳೆನಿಸಿದ ಸುಂದರ ವಿಠಲಾಂಕಿತ ಗೋರಬಾಳ್ ಹನುಮಂತರಾಯರು ತಮ್ಮ 'ಸದಾಚಾರ'ವೆನ್ನುವ ರಚನೆಯಲ್ಲಿ ಈ ವಿಷಯವನ್ನು ಸ್ಪಷ್ಟ ಪಡಿಸಿರುವರು. ಪ್ರಾತಃಕಾಲದಲ್ಲಿ ಮೊಟ್ಟಮೊದಲು ಭಗವಂತನನ್ನು ಒಂದು ಕ್ರಮದಲ್ಲಿ ಸ್ತುತಿಸಿ ನಂತರ ದೇವತೆಗಳನ್ನೂ, ಯತಿಗಳನ್ನೂ,

ಹರಿದಾಸರನ್ನೂ ಸ್ತುತಿಸಬೇಕು. ಇವೆಲ್ಲವೂ ಮೇಲಿನಿಂದ ಕೆಳಗೆ ಬರುವ ಕ್ರಮದಲ್ಲಿ ವ್ಯವಸ್ಥಿತವಾಗಿರಬೇಕು. ದೇವತೆಗಳ ತಾರತಮ್ಯವನ್ನು ಆರೋಹಣರೂಪದಲ್ಲೂ ಅವರೋಹಣರೂಪದಲ್ಲೂ ಜ್ಞಾನಿಗಳು ಸ್ಪಷ್ಟಪಡಿಸಿರುವರು. ಯತಿಗಳ ಹಾಗೂ ಹರಿದಾಸರ ತಾರತಮ್ಯವನ್ನು ಮಾತ್ರ ಕಾಲಮಾನಗಳಿಗನುಸಾರವಾಗಿ ತಿಳಿದುಕೊಳ್ಳಬೇಕು.

ಪ್ರಾತಃಕಾಲದ ಅವರೋಹಣಾರೂಪವಾದ ಭಜನೆಯ ವ್ಯವಸ್ಥೆಗೆ ಮೂಲ ಸೃಷ್ಟಿ ಚಿಂತನೆಯಾಗಿದೆ. ಸೃಷ್ಟಿಪ್ರಕರಣದಲ್ಲಿ ಮೊಟ್ಟಮೊದಲು ಭಗವಂತನು ತನ್ನ ರೂಪಗಳನ್ನು ಪ್ರಕಟಗೊಳಿಸಿ, ನಂತರ ರಮೆಯ ರೂಪಗಳನ್ನೂ ನಂತರ ಬ್ರಹ್ಮಾದಿ ದೇವತೆಗಳ ರೂಪಗಳನ್ನೂ ಪ್ರಕಟಗೊಳಿಸಿರುವನು.

ವಿಸ್ತಾರವಾದ ನೂರುವರ್ಷದ ಬ್ರಹ್ಮಕಲ್ಪದಲ್ಲಿ ನಡೆಯುವ ಭಗವಂತನ ಸೃಷ್ಟಿ - ಸ್ಥಿತಿ - ಲಯಗಳು ನಿತ್ಯದಲ್ಲೂ ಪ್ರತಿಜೀವಿಯ ಜೀವನದಲ್ಲಿ ಸೂಕ್ಷ್ಮರೂಪದಲ್ಲಿ ಅನುಭವಕ್ಕೆ ಬರುವವು. ಏಳುವುದು ಸೃಷ್ಟಿಯಾದರೆ, ಎದ್ದಕ್ಷಣದಿಂದ ಪುನಃ ಮಲಗುವ ವರೆಗೆ ನಡೆಯುವ ವ್ಯಾಪಾರ ಸ್ಥಿತಿ ಎನಿಸುವುದು. ನಿದ್ರೆಯೇ ಲಯ. ಸೃಷ್ಟಿಯ ಪ್ರಾರಂಭದಲ್ಲಿ ಅಸೃಜ್ಯಾವಸ್ಥೆಯಿಂದ ಜೀವರನ್ನು ಸೃಷ್ಟಿಗೆ ತಂದ ಭಗವಂತ, ಸ್ಥಿತಿಕಾಲದಲ್ಲಿ ಅವರಿಂದ ಯಥಾಯೋಗ್ಯವಾಗಿ ಸಾಧನೆ ಮಾಡಿಸಿ, ಅವರವರ ಗತಿಗಳನ್ನು ಅವರಿಗೆ ಕೊಡುವುದಕ್ಕಾಗಿ ಲಯಕಾರ್ಯ ಮಾಡುವನು. ಭಗವಂತನ ಈ ದಿವ್ಯ ವ್ಯಾಪಾರವನ್ನು ಸಾಧಕನು ಪ್ರತಿನಿತ್ಯದಲ್ಲೂ ತನ್ನ ಜೀವನಕ್ಕೆ ಹೋಲಿಸಿ ಕೊಂಡು ಚಿಂತಿಸಿ ದಿವ್ಯಜ್ಞಾನ ಪಡೆಯಲೆಂಬ ಸದುದ್ದೇಶದಿಂದಲೇ ಜ್ಞಾನಿಗಳು ಪ್ರಾತಃಕಾಲದಲ್ಲಿ ಏಳುವ ವ್ಯವಹಾರವನ್ನು ಸೃಷ್ಟಿಚಿಂತನೆಯನ್ನಾಗಿಯೂ, ಮಲಗುವವರೆವಿಗೂ ನಡೆಯುವ ಭಗವತ್ಪೂಜಾತ್ಮಕ ಸಕಲ ಸಾಧನಗಳನ್ನು ಸ್ಥಿತಿರೂಪ ಚಿಂತನೆಯನ್ನಾಗಿಯೂ, ರಾತ್ರಿಯ ಮಲಗುವ ವ್ಯಾಪಾರವನ್ನು ಲಯಚಿಂತನೆಯನ್ನಾಗಿಯೂ ಚಿಂತಿಸಬೇಕೆಂದು ಸೂಚಿಸಿರುವರು.

## ಆರೋಹಣಾಕ್ರಮದಲ್ಲಿ ರಾತ್ರಿ ಭಜನೆ

ರಾತ್ರಿಯಲ್ಲಿ ಆರೋಹಣಾರೂಪದಲ್ಲಿ ಭಜನೆ ಮಾಡಬೇಕು. ಇದರ ಉದ್ದೇಶ ಲಯಚಿಂತನೆಯನ್ನು ಜ್ಞಾಪಿಸುವುದಾಗಿದೆ. ರಾತ್ರಿಯಲ್ಲಿ ಮೊಟ್ಟಮೊದಲು ಕೆಳಗಿನಿಂದ ಎಲ್ಲಾ ಹರಿದಾಸರನ್ನು ಸ್ತುತಿಸಿ, ನಂತರ ಅದೇ ಕ್ರಮದಲ್ಲಿ ಯತಿಗಳನ್ನು, ದೇವತೆಗಳನ್ನು ಕೊಂಡಾಡಿ, ಕೊನೆಗೆ ಶ್ರೀನಿವಾಸನನ್ನು ಸ್ತುತಿಸಬೇಕು.

ಲಯಕಾಲವು ಆಸನ್ನವಾದಾಗ ಪರಬ್ರಹ್ಮನು ಕೆಳಗಿನ ದೇವತೆಗಳಿಂದ ಹಿಡಿದು ಒಬ್ಬರಲ್ಲಿ ಒಬ್ಬರು ಲಯಹೊಂದುವಂತೆ ಮಾಡುವನು. ಅರ್ಥಾತ್ ದೇವತೆಗಳು ಆರೋಹಣಾಕ್ರಮದಲ್ಲಿ ತಮಗಿಂತ ಮೇಲಿರುವ ದೇವತೆಗಳಲ್ಲಿ ಲಯಹೊಂದುತ್ತಾ

ಹೋಗುವರು. ಇದರಲ್ಲಿ ಗರುಡಮಾರ್ಗವೆಂತಲೂ ಶೇಷಮಾರ್ಗವೆಂತಲೂ ಎರಡು ಲಯಮಾರ್ಗಗಳು. ಗರುಡಮಾರ್ಗ ಶೇಷಮಾರ್ಗದಿಂದ ಬಂದ ದೇವತೆಗಳೆಲ್ಲರೂ ಕೊನೆಗೆ ಚತುರ್ಮುಖಬ್ರಹ್ಮನಲ್ಲಿ ಲಯಹೊಂದುವರು. ಆ ಚತುರ್ಮುಖಬ್ರಹ್ಮನು ರಮೆಯಲ್ಲಿ ಲಯಹೊಂದುವನು. ರಮಾದೇವಿಗೆ ಪರಮಾತ್ಮನ ಅತಿ ಸಾಮೀಪ್ಯವೇ ಲಯವೆನಿಸುವುದು. ಕೊನೆಗೆ ಎಲ್ಲವನ್ನು ತನ್ನ ಉದರದಲ್ಲಿ ಇಟ್ಟುಕೊಂಡು ಪರಬ್ರಹ್ಮನು ವಟಪತ್ರಶಾಯಿಯಾಗಿ ಮಲಗುವನು. ಇಂಥಾ ಲಯ ಚಿಂತನೆಯ ಬಗೆಯನ್ನು ತೋರಿ ಕೊಡುವುದಕ್ಕಾಗಿಯೇ ಶಿಷ್ಟರು ರಾತ್ರಿಯ ಸಮಯದಲ್ಲಿ ಭಜನಾ ಕಾರ್ಯಕ್ರಮವನ್ನು ಆರೋಹಣಾರೂಪವಾಗಿ ವ್ಯವಸ್ಥೆಗೊಳಿಸಿರುವರು. ರಾತ್ರಿಯ ಭಜನೆಯಲ್ಲಿ ಯೋಜಿತವಾದ ಭಗವಂತನ ಲಾಲಿ ಸೇವೆಯು ಸಹ ವಟಪತ್ರಶಾಯಿಯೂ ಬಾಲರೂಪಿಯೂ ಆದ ಶೂನ್ಯನಾಮಕ ಪರಮಾತ್ಮನ ಸುಂದರ ರೂಪವನ್ನು ಕಣ್ಣಮುಂದೆ ತಂದು ನಿಲ್ಲಿಸುವುದು.

ಪ್ರಾತಃಕಾಲದ ಭಜನೆಯಲ್ಲಿ ಭಜನೆ ಮುಗಿದ ಮೇಲೆ ಭಗವಂತನಿಗೆ ಮಂಗಳದ ಆರತಿ ಕೊನೆಯಲ್ಲಿ ಸರ್ವಕರ್ಮ ಸಮರ್ಪಣೆ ಇರುತ್ತದೆ. ರಾತ್ರಿ ಭಜನೆಯಲ್ಲಿ ಈ ಮೇಲ್ಕಂಡ ವಿಷಯಗಳೊಟ್ಟಿಗೆ ಕೊನೆಯಲ್ಲಿ ಲಾಲಿ ಸೇವೆಯು ವಿಶೇಷವಾಗಿರುತ್ತದೆ. ಭಗವಂತನ ಲಾಲಿಸೇವೆಯ ನಂತರ ಸಂಪ್ರದಾಯಕ್ಕನುಗುಣವಾಗಿ ಅವರೋಹಣರೂಪದಲ್ಲಿ ಲಕ್ಷ್ಮಿಗೆ, ವಾಯುದೇವರಿಗೆ, ಕೃತಿಗಳು ಉಪಲಬ್ಧವಿದ್ದಲ್ಲಿ ಇತರ ದೇವತೆಗಳಿಗೆ, ನಂತರ ಯತಿಗಳಿಗೆ ಕೊನೆಯಲ್ಲಿ ಹರಿದಾಸರಿಗೆ ಲಾಲಿಹಾಡಬೇಕು. ಈ ಎಲ್ಲವೂ ತಾರತಮ್ಯಕ್ಕನುಗುಣವಾಗಿಯೇ ನಡೆಯಬೇಕು. ಲಾಲಿಸೇವೆ ಮುಗಿದನಂತರ ಸರ್ವಕರ್ಮ ಸಮರ್ಪಣೆ. ಇದು ಪರಂಪರಾಪ್ರಾಪ್ತವಾದ ಭಜನಾಪದ್ಧತಿ.

## ಭಗವಂತನ ಸ್ತುತಿಕ್ರಮ

ಪ್ರಾತಃಕಾಲ ಮತ್ತು ರಾತ್ರಿಯ ಭಜನೆಯಲ್ಲಿ ಹೇಳುವ ಭಗವಂತನ ಹಾಡುಗಳಲ್ಲಿ ಒಂದು ಕ್ರಮವನ್ನು ಅನುಸರಿಸಬೇಕು. ಭಜನೆ ಒಂದುವಿಧದಲ್ಲಿ ಭಗವಂತನ ಪೂಜೆ ಎನಿಸುವುದು. ("ಭಜಸೇವಾಯಾಂ") ಶಾಸ್ತ್ರದ ಪ್ರಕಾರ ಪೂಜೆ ಮಾಡುವಾಗ ಭಗವಂತನಿಗೆ ಷೋಡಶೋಪಚಾರಗಳನ್ನು ಸಮರ್ಪಿಸಬೇಕು. ಶಾಸ್ತ್ರಗಳಲ್ಲಿ ಷೋಡಶೋಪಚಾರಗಳು ಭಿನ್ನ ಭಿನ್ನವಾದ ಕ್ರಮದಲ್ಲಿ ಹೇಳಲ್ಪಟ್ಟಿವೆ. ಹರಿದಾಸರಿಗೆ ಸಮ್ಮತವಾದ ಷೋಡಶೋಪಚಾರಕ್ರಮವು ಈ ಕೆಳಗಿನಂತಿದೆ.

| | |
|---|---|
| 1. ಆವಾಹನೆ | 4. ಪಾದ್ಯ |
| 2. ಆಸನ | 5. ಆಚಮನ |
| 3. ಅರ್ಘ್ಯ | 6. ಸ್ನಾನ |

7. ವಸ್ತ್ರ
8. ಆಭರಣ - ಉಪವೀತ
9. ಗಂಧ
10. ಪುಷ್ಪ
11. ಧೂಪ
12. ದೀಪ
13. ನೈವೇದ್ಯ
14. ಮಂಗಳಾರತಿ
15. ಲಾಲಿ
16. ಸರ್ವಸಮರ್ಪಣೆ

ಸಮಾಜದ ಮೇಲೆ ಹರಿದಾಸರು ತೋರಿದ ಕರುಣೆ ಅಪಾರ. ಪಾಂಚರಾತ್ರಾಗಮೋಕ್ತ ಪೂಜಾವಿಧಾನವನ್ನು ಆಚಾರ್ಯಮಧ್ವರು ತಮ್ಮ ತಂತ್ರಸಾರ ಸಂಗ್ರಹದಲ್ಲಿ ವಿವರಿಸಿರುವರು. ಟೀಕಾಕೃತ್ಪಾದರು ಪದ್ಮಮಾಲಾದಲ್ಲಿ ಅದನ್ನೇ ಸಂಕ್ಷೇಪಿಸಿರುವರು. ನಂತರದ ಅನೇಕ ಜ್ಞಾನಿಗಳು ಪೂಜಾವಿಧಾನವನ್ನು ವಿಸ್ತಾರವಾಗಿಯೂ, ಸಂಕ್ಷೇಪವಾಗಿಯೂ, ಸಂಸ್ಕೃತಭಾಷೆಯಲ್ಲಿ ಶ್ರುತಿ - ಸ್ಮೃತಿ - ಪುರಾಣ ವಾಕ್ಯಗಳನ್ನು ವಿವರಿಸುತ್ತಾ ಬಳಸಿರುವರು.

ಈ ಪೂಜೆ ಎಲ್ಲಾ ಕಾಲಗಳಲ್ಲೂ, ಎಲ್ಲಾ ಸ್ಥಳಗಳಲ್ಲೂ, ಎಲ್ಲರಿಂದಲೂ ಮಾಡಲು ಸಾಧ್ಯವಾಗದ ಪ್ರಕ್ರಿಯೆ. ಕರುಣಾಳುಗಳಾದ ಹರಿದಾಸರು ಈ ಅಪೂರ್ವ ಪೂಜಾವಿಧಾನವನ್ನು ಭಜನಾಪದ್ಧತಿಯಲ್ಲಿ ಅಳವಡಿಸಿ ಸಮಾಜಕ್ಕೆ ಮಹದುಪಕಾರವನ್ನು ಮಾಡಿರುವರು. ಈ ಭಜನಾರೂಪ ಪೂಜೆಗೆ ದೇಶ - ಕಾಲ - ವ್ಯಕ್ತಿಗಳ ನಿಯಮವಿಲ್ಲ. ಇದಕ್ಕೆ ಬೇಕಾದುದು ಪರಿಶುದ್ಧವಾದ ಮನಸ್ಸು. ಬಾಹ್ಯಶುದ್ಧಿಯಿಲ್ಲದೆ ಅಂತಃ ಶುದ್ಧಿ ಸಿಗಲಾರದು. ಎಲ್ಲಕ್ಕಿಂತಲೂ ಮಿಗಿಲಾಗಿ ಈ ಭಜನಾರೂಪ ಪೂಜೆಗೆ ಬೇಕಾದುದು ಹರಿಸರ್ವೋತ್ತಮ, ವಾಯುಜೀವೋತ್ತಮ, ಪಂಚಭೇದ ಯುಕ್ತ ತಾರತಮ್ಯಗಳ ಜ್ಞಾನದಿಂದ ಕೂಡಿದ ನಿರ್ಮಲವಾದ ಭಕ್ತಿ.

ದಾಸಸಾಹಿತ್ಯಾಭಿಮಾನಿಗಳ ದುರ್ದೈವವೋ ಎನ್ನುವಂತೆ ಸಮಗ್ರ ಹರಿದಾಸಸಾಹಿತ್ಯ ಇಂದು ಉಪಲಬ್ಧವಿಲ್ಲ. ದೊರೆತದ್ದು ಸ್ವಲ್ಪ. ಲುಪ್ತವಾದುದು ಬಹಳ. ಷೋಡಶೋಪಚಾರ ಪೂಜಾ ವಿಧಾನವನ್ನು ತಿಳಿಸಿಕೊಟ್ಟ ಹರಿದಾಸರು, ಆ ಉಪಚಾರಗಳ ಸಮರ್ಪಣೆಗೆ ಸಂಬಂಧಿಸಿದ ಕೃತಿಗಳನ್ನು ಮಾಡಿಲ್ಲವೆಂದು ಹೇಳಲಾಗದು. ಆವಾಹನೆ, ಧೂಪ, ದೀಪ, ನೈವೇದ್ಯಾದಿ ಕೆಲ ಉಪಚಾರಗಳಿಗೆ ಸಂಬಂಧಿಸಿದ ಕೃತಿಗಳು ದೊರೆಯುತ್ತಿವೆ. ಆಸನ, ಅರ್ಘ್ಯ, ಪಾದ್ಯ ಮುಂತಾದ ಉಪಚಾರಗಳ ಬಗ್ಗೆ ಪ್ರತ್ಯೇಕವಾಗಿ ಕೃತಿಗಳು ಇಂದು ದೊರೆಯುತ್ತಿಲ್ಲ. ಇಂಥಾ ಸಂದರ್ಭದಲ್ಲಿ ದಾಸರು ತೋರಿಕೊಟ್ಟ ಆ ಆ ಉಪಚಾರಗಳಿಗೆ ಸಂಬಂಧಿಸಿದ ಭಗವದ್ರೂಪಗಳನ್ನು ಚಿಂತಿಸುತ್ತಾ ವಾಕ್ಯರೂಪದಲ್ಲಿ ಅವುಗಳನ್ನು ಸ್ವಾಮಿಗೆ ಸಮರ್ಪಿಸುತ್ತಾ ಭಜನೆ ಮಾಡಿದಲ್ಲಿ ಷೋಡಶೋಪಚಾರಾತ್ಮಕ ಪೂಜೆ ಮಾಡಿದ ಫಲವು ಸಿದ್ಧಿಸುವುದು.

# 1. ಆವಾಹನೆ

(ಅ) ಭಕ್ತಿಯಿಂದ ಭಗವಂತನನ್ನು ಬಾಯೆಂದು ಕರೆಯಬೇಕು.

ಉದಾ : ೧. ಬಾ ಬಾ ಭಕುತರ ಹೃದಯಮಂದಿರಾ!
೨. ಬಾರೋ ಮನೆಗೆ ಗೋವಿಂದಾ!

(ಇ) ಭಗವಂತನ ದರ್ಶನಕ್ಕಾಗಿ ಆರಾಟ ಪಡಬೇಕು.

ಸರ್ವತ್ರವ್ಯಾಪ್ತಾ! ಶ್ರೀನಿವಾಸಾ! ಎಂದು ನಿನ್ನನ್ನು ಕಂಡು ಆನಂದಿಸುವೆನು?

ಉದಾ : ೧. ಎಂದು ಕಾಂದೆನೊ ಎನ್ನ ಸಲಹುವ.......
೨. ಎಂದಿಗೆ ನಿನ್ನ ಪಾದ ಕಾಂಬೆ ?.......

(ಉ) ಸರ್ವತ್ರವ್ಯಾಪ್ತನಾದ ವಾಸುದೇವನನ್ನು ತೋರಿಸಿರಿ ಎಂದು ದೇವತೆಗಳಲ್ಲಿ ಪ್ರಾರ್ಥನೆ ಸಲ್ಲಿಸಬೇಕು.

ಓ ತತ್ತ್ವದೇವತೆಗಳಿರಾ! ಸರ್ವಪ್ರೇರಕನಾದ ಶ್ರೀನಿವಾಸನನ್ನು ಒಮ್ಮೆ ತೋರಿಸಿರಿ.

ಉದಾ : ೧. ತಾರಮ್ಮಯ್ಯ ಯದುಕುಲವಾರಿಧಿ ಚಂದ್ರಮನ.
೨. ವೆಂಕಟಾದ್ರಿ ನಿಲಯನ ಪಂಕಜನಾಭನ ತೋರಮ್ಮ ಲಕುಮಿ!

(ಋ) ಕರೆದರೂ ಬಾರದೇ ಇರುವ ಪ್ರಹ್ಲಾದ ವರದನಿಗಾಗಿ ಕಣ್ಣೀರಿಡುತ್ತಾ ಕಾರಣವನ್ನು ಕೇಳಬೇಕು.

ಓ ಕರಿರಾಜವರದಾ! ನನ್ನ ಕೂಗು ನಿನ್ನ ಕಿವಿಗೆ ಕೇಳಿಸದೇ ?

ಉದಾ : ೧. ಕೂಗಿದರೂ ಧ್ವನಿ ಕೇಳದೇ ಶಿರಬಾಗಿದರೂ ದಯಬಾರದೇ?
೨. ಏಕೆ ದಯ ಬಾರದೋ ಲೋಕನಾಯಕ?

(ಎ) ಆತ್ಮನಾದಕ್ಕೆ ಮೆಚ್ಚಿ ಬಂದ ಗೋವಿಂದನನ್ನು ಕಂಡು ಮನ ಉಬ್ಬಿ ಹಾಡಬೇಕು.

ಪ್ರಹ್ಲಾದವರದಾ! ಗೋವಿಂದಾ! ಕರುವಿನ ಮೊರೆಗಾವು ನೆರೆದಂತೆ ಓಡಿ ಬಂದೆಯಾ!

ಉದಾ : ಬಂದನೋ ಗೋವಿಂದ ಛಂದದಿ ಆನಂದ!
ದೇವ ಬಂದಾ ನಮ್ಮ ಸ್ವಾಮಿ ಬಂದಾನೋ

(ಓ) ಭಗವದ್ದರ್ಶನದಿಂದ ಆದ ಆನಂದವನ್ನು ವ್ಯಕ್ತಮಾಡುತ್ತಾ ಪರವಶದಿಂದ ಹಾಡಬೇಕು.

ಆನಂದ ಮೂರುತೀ! ನಿನ್ನ ದರ್ಶನದಿಂದ ಇಂದು ನಾ ಧನ್ಯನಾದೆ.

ಉದಾ : ೧. ಕಂಡೆನಾ ಗೋವಿಂದನ ಗೋಪಾಲನ !

೨. ಇಂದು ನೋಡಿದೆ ನಂದದಾಯಕ !

(ಕ) ಬಂದ ಗೋವಿಂದನಿಗೆ ಅನಂತವಂದನೆಗಳನ್ನು ಸಮರ್ಪಿಸಬೇಕು.

ಕೃಷ್ಣಾ! ನಿನ್ನ ಇಂದಿರಾರಾಧ್ಯಪಾದಾರವಿಂದಗಳಿಗೆ ಈ ದಾಸನ ದೀರ್ಘದಂಡಪ್ರಣಾಮಗಳು.

ಉದಾ : ೧. ಶರಣು ಶರಣು ಹೇ ಪರಮಪುರುಷಾ!

೨. ನಮೋ ನಮೋ ವೇಂಕಟೇಶಾ !

## 2. ಆಸನ

ಬಂದ ಪರಾತ್ಪರನಿಗೆ ಆಸನವನ್ನು ಸಮರ್ಪಿಸಬೇಕು.

ಬ್ರಹ್ಮಾಂಡವನ್ನು ವ್ಯಾಪಿಸಿನಿಂತ, ಶೇಷನನ್ನೇ ಆಸನವಾಗಿ ಉಳ್ಳ ಓ ವಾಸುದೇವಾ! ನಿನಗೆ ಆಸನವನ್ನು ಸಮರ್ಪಿಸುತ್ತಿರುವೆನು.

ಶ್ರೀ ಶೇಷಾಸನಾಯ ವಾಸುದೇವಾಯ ನಮಃ. ಆಸನಂ ಸಮರ್ಪಯಾಮಿ.

## 3. ಅರ್ಘ್ಯ

ಭಕ್ತಪರಾಧೀನನಾಗಿ ಆಸನದಲ್ಲಿ ಕುಳಿತ ಮಹತೋ ಮಹೀಯನಾದ ವಾಸುದೇವನಿಗೆ ಅರ್ಘ್ಯವನ್ನು ಕೊಡಬೇಕು.

"ವರಾಭಯ ಮುದ್ರೆಗಳಿಂದ ಒಪ್ಪುವ ಪವಿತ್ರ ಹಸ್ತವುಳ್ಳ ಓ ವಾಸುದೇವಾ! ಲಕ್ಷ್ಮೀಹಸ್ತದಿಂದ ನಿನಗೆ ಅರ್ಘ್ಯವನ್ನು ಸಮರ್ಪಿಸುತ್ತಿರುವೆನು".

ಶ್ರೀ ವಾಸುದೇವಾಯ ನಮಃ. ಲಕ್ಷ್ಮೀಹಸ್ತೇನ ಅರ್ಘ್ಯಂ ಸಮರ್ಪಯಾಮಿ.

## 4. ಪಾದ್ಯ

ಒಂದೇ ಪಾದದಿಂದ ಎಲ್ಲ ಲೋಕಗಳನ್ನೂ ಅಳೆದ ಸಂಕರ್ಷಣನಿಗೆ ಪಾದ್ಯವನ್ನು ಅರ್ಪಿಸಬೇಕು.

"ಅಂಗುಟಾಗ್ರದಿ ಅಮರತರಂಗಿಣಿಯನ್ನು ಪಡೆದ ಓ ಸಂಕರ್ಷಣಾ! ಸರಸ್ವತೀ ಹಸ್ತದಿಂದ ನಿನಗೆ ಪಾದ್ಯವನ್ನು ಸಮರ್ಪಿಸುತ್ತಿರುವೆನು".

"ಶ್ರೀ ಸಂಕರ್ಷಣಾಯ ನಮಃ. ಸರಸ್ವತೀ ಹಸ್ತೇನ ಪಾದ್ಯಂ ಸಮರ್ಪಯಾಮಿ."

## 5. ಆಚಮನ

ಜಗತ್ತನ್ನು ಸದಾ ಶುದ್ಧಗೊಳಿಸುವ ಪ್ರದ್ಯುಮ್ನನಿಗೆ ಆಚಮನವನ್ನು ಕೊಡಬೇಕು.

ಪಾದತೀರ್ಥದಿಂದ ಜಗತ್ತನ್ನು ಪವಿತ್ರಗೊಳಿಸುವ ಓ ಪ್ರದ್ಯುಮ್ನಾ! ರತಿ ಹಸ್ತದಿಂದ ನಿನಗೆ ಆಚಮನವನ್ನು ಸಮರ್ಪಿಸುತ್ತಿರುವೆನು.

ಶ್ರೀ ಪ್ರದ್ಯುಮ್ನಾಯ ನಮಃ. ರತಿಹಸ್ತೇನ ಆಚಮನೀಯಂ ಸಮರ್ಪಯಾಮಿ.

## 6. ಸ್ನಾನ

ಸಕಲ ಪವಿತ್ರ ತೀರ್ಥಗಳ ಉತ್ಪತ್ತಿಗೆ ಕಾರಣನಾದ ಶ್ರೀಹರಿಗೆ ಸ್ನಾನವನ್ನು ಸಮರ್ಪಿಸಬೇಕು.

ನಿತ್ಯನಿರ್ಮಲನಾದ, ವರುಣಾಂತರ್ಗತನಾದ ಶ್ರೀಹರೀ! ನಿನಗೆ ಸುಶೀಲಾ ಹಸ್ತದಿಂದ ಸ್ನಾನವನ್ನು ಸಮರ್ಪಿಸುತ್ತಿರುವೆನು.

ವರುಣಾಂತರ್ಗತ ಶ್ರೀಹರಯೇ ನಮಃ. ಸುಶೀಲಾಹಸ್ತೇನ ಸ್ನಾನಂ ಸಮರ್ಪಯಾಮಿ.

ಉದಾ : ಮಂಗಳ ಸ್ನಾನ ಮಾಡೇಳೋ ಜಗನ್ಮಂಗಳ-
ದಾಯಕ ಹರಿಯೇ ದಯಾಳೊ

## 7. ವಸ್ತ್ರ

ಜಗತ್ತಿನಲ್ಲಿ ಓತಪ್ರೋತವಾಗಿ ವ್ಯಾಪಿಸಿದ ವಾಸುದೇವನಿಗೆ ವಸ್ತ್ರವನ್ನು ಸಮರ್ಪಿಸಬೇಕು.

"ದ್ರೌಪತೀ ಮಾನಸಂರಕ್ಷಕಾ! ವಾಸುದೇವಾ! ಗರುಡನ ಕೈಗಳಿಂದ ವಸ್ತ್ರವನ್ನು ಸಮರ್ಪಿಸುತ್ತಿರುವೆನು."

"ಶ್ರೀ ವಾಸುದೇವಾಯ ನಮಃ. ಗರುಡ ಹಸ್ತೇನ ವಸ್ತ್ರಂ ಸಮರ್ಪಯಾಮಿ".

## 8. ಆಭರಣ - ಯಜ್ಞೋಪವೀತ

ಕೋಟಿ ಮನ್ಮಥರ ಲಾವಣ್ಯದಿಂದೊಪ್ಪುವ ನಾರಾಯಣನಿಗೆ ಆಭರಣ - ಯಜ್ಞೋಪವೀತಗಳನ್ನು ಸಮರ್ಪಿಸಬೇಕು.

"ಸ್ವರೂಪಭೂತ ದಿವ್ಯಾಭರಣಗಳಿಂದೊಪ್ಪುವ ಓ ನಾರಾಯಣಾ! ನಿನಗೆ ಲಕ್ಷ್ಮೀ ಹಸ್ತದಿಂದ ಆಭರಣಗಳನ್ನು ಸಮರ್ಪಿಸುತ್ತಿರುವೆನು".

"ನಾರಾಯಣಾಯ ನಮಃ. ಲಕ್ಷ್ಮೀಹಸ್ತೇನ ನಾನಾವಿಧ ಆಭರಣಾನಿ ಸಮರ್ಪಯಾಮಿ".

"ವೇದೈಕಗಮ್ಯ ಓ ಉಪೇಂದ್ರಾ! ನಿನಗೆ ವಿದ್ಯಾದೇವಿಯ ಹಸ್ತದಿಂದ ಯಜ್ಞೋಪವೀತವನ್ನು ಸಮರ್ಪಿಸುತ್ತಿರುವೆನು.

"ಶ್ರೀ ಉಪೇಂದ್ರಾಯ ನಮಃ. ವಿದ್ಯಾಹಸ್ತೇನ ಯಜ್ಞೋಪವೀತಂ ಸಮರ್ಪಯಾಮಿ".

## 9. ಗಂಧ

ಚತುರ್ವಿಂಶತಿ ತತ್ವಗಳಿಗೆ ಸತ್ತಾಪ್ರದನಾದ ಶ್ರೀಕೃಷ್ಣನಿಗೆ ಗಂಧವನ್ನು ಸಮರ್ಪಿಸಬೇಕು.

"ಕುಬ್ಜೆಗೆ ಒಲಿದ ಓ ಶ್ರೀಕೃಷ್ಣಾ! ರತಿಪತಿಕಾಮನ ಹಸ್ತಗಳಿಂದ ನಿನಗೆ ಗಂಧವನ್ನು ಸಮರ್ಪಿಸುತ್ತಿರುವೆನು".

ಶ್ರೀಕೃಷ್ಣಾಯ ನಮಃ. ರತಿಪತಿ ಕಾಮಹಸ್ತೇನ ಗಂಧಂ ಸಮರ್ಪಯಾಮಿ.

## 10. ಪುಷ್ಪ

ಕಣ್ವನಿಂದ ತುಳಸಿಯನ್ನು ಪಡೆದ ಪದ್ಮನಾಭನಿಗೆ ಪರಿಮಳ ಪುಷ್ಪಗಳನ್ನೂ, ತುಳಸೀದಳಗಳನ್ನೂ ಅರ್ಪಿಸಬೇಕು.

(ಅ) ಹೊಕ್ಕಳಿನಿಂದ ಚತುರ್ದಶ ದಳಾತ್ಮಕವಾದ ಸುವರ್ಣ ಕಮಲವನ್ನು ಧರಿಸಿದ ಓ ಪದ್ಮನಾಭಾ!ವರುಣನಿಂದ ಅಭಿಮನ್ಯಮಾನವಾದ ದೂರ್ವಾಂಕುರವನ್ನೂ, ರುದ್ರನಿಂದ ಅಭಿಮನ್ಯಮಾನವಾದ ಶ್ವೇತಪುಷ್ಪವನ್ನೂ, ಗರುಡನಿಂದ ಅಭಿಮನ್ಯಮಾನವಾದ ಪುನ್ನಾಗಪುಷ್ಪವನ್ನೂ, ಭೀಮಸೇನನಿಂದ ಅಭಿಮನ್ಯಮಾನವಾದ ಸೌಗಂಧಿಕಾ ಪುಷ್ಪವನ್ನೂ, ಆಂಜನೇಯನಿಂದ

ಅಭಿಮನ್ಯಮಾನವಾದ ಪಾರಿಜಾತ ಪುಷ್ಪವನ್ನೂ, ಲಕ್ಷ್ಮಿಯಿಂದ ಅಭಿಮನ್ಯ ಮಾನವಾದ ತುಳಸೀದಳಗಳನ್ನೂ ನಿನ್ನ ಅಡಿದಾವರೆಗಳಿಗೆ ಅರ್ಪಿಸುತ್ತಿದ್ದೇನೆ.

"ಶ್ರೀ ಪದ್ಮನಾಭಾಯ ನಮಃ. ನಾನಾ ವಿಧ ಪರಿಮಳ ಪುಷ್ಪಾಣಿ ತಥಾ ತುಳಸೀದಲಾನಿ ಸಮರ್ಪಯಾಮಿ".

(ಇ)ಪುಷ್ಪಗಳ ಸಮರ್ಪಣೆಯ ನಂತರ ಶ್ರೀಹರಿಯ ಕಲ್ಯಾಣಗುಣಗಳನ್ನೂ, ಮಹಾಮಹಿಮೆಗಳನ್ನೂ ಹಾಡಿ, ಅವನಲ್ಲಿ ಆತ್ಮಾರ್ಪಣೆ ಪೂರ್ವಕ ಪ್ರಾರ್ಥನೆಯನ್ನು ಸಲ್ಲಿಸಬೇಕು.

"ಶ್ರುತಿತತಿಗಳಿಗಭಿಮಾನಿ ಲಕ್ಷ್ಮೀಸ್ತುತಿಗಳಿಗೆ ಗೋಚರಿಸದ ಅಪ್ರತಿಹತ ಮಹೈಶ್ವರ್ಯಾದ್ಯಖಿಳ ಸದ್ಗುಣ ಗಣಾಂಬೋಧಿ! ಶ್ರೀನಿವಾಸಾ! ನಿನ್ನ ಅನಂತ ಮಹಿಮೆಗಳನ್ನು ನಾನೆಂತು ವರ್ಣಿಸಲಿ?"

ಉದಾ : 1. ಜಯತು ಕೋದಂಡರಾಮ !

2. ನೀನೇ ದಯಾಳೋ ನಿರ್ಮಲ ಚಿತ್ತ ಗೋವಿಂದಾ!

(ಉ) ಪ್ರಸನ್ನನಾದ ಪರಾತ್ಪರನ ಪಾದಾರವಿಂದಗಳಲ್ಲಿ ಆತ್ಮಾರ್ಪಣೆ ಪೂರ್ವಕ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಕರುಣಾಮಯಾ! ಭಕ್ತ ಬಂಧೋ! ನಿನ್ನ ಅಡಿದಾವರೆಗಳಲ್ಲಿ ಪ್ರಾರ್ಥನಾ ಸುಮಾಂಜಲಿಯನ್ನು ಸಮರ್ಪಿಸುತ್ತಿರುವೆನು.

ಉದಾ : 1. ಪಾಲಿಸಯ್ಯ ಪವನಾನಯ್ಯ ಪಾಲವಾರಿಧಿಶಯ್ಯಾ

2. ದಾಸನ ಮಾಡಿಕೊ ಎನ್ನ ಸ್ವಾಮಿ ಸಾಸಿರನಾಮದ ವೇಂಕಟರಮಣ!

## 11. ಧೂಪ

ದುಷ್ಟ ಶಿಕ್ಷಕನೂ, ಶಿಷ್ಟ ರಕ್ಷಕನೂ, ಆದ ಜನಾರ್ದನನಿಗೆ ಧೂಪವನ್ನು ಅರ್ಪಿಸಬೇಕು.

"ಆನಂದ ಸ್ವರೂಪಿಯಾದ ಓ ಜನಾರ್ದನಾ! ನಿನಗೆ ನಿರಋತಿಯ ಕೈಗಳಿಂದ ಧೂಪವನ್ನು ಸಮರ್ಪಿಸುವೆನು."

ಶ್ರೀ ಜನಾರ್ದನಾಯ ನಮಃ. ನಿರಋತಿ ಹಸ್ತೇನ ಧೂಪಂ ಸಮರ್ಪಯಾಮಿ.

ಉದಾ : 1. "ಧೂಪಾರತಿಯ ನೋಡ ಬನ್ನಿ".

## 12. ದೀಪ

ಜ್ಯೋತಿಯಲ್ಲಿ ಜ್ಯೋತಿಸ್ವರೂಪನಾದ ಪ್ರದ್ಯುಮ್ನನಿಗೆ ಏಕಾರತಿ ಹಾಗೂ ದೀಪಗಳನ್ನು ಸಮರ್ಪಿಸಬೇಕು.

"ಕೋಟಿಸೂರ್ಯ ಪ್ರಭಾಭಾಸಿತಾ ಓ ಪ್ರದ್ಯುಮ್ನಾ! ಶೇಷ, ವರುಣ - ಧರಣೀ - ಅಗ್ನಿಗಳ ಕೈಯಿಂದ ನಿನಗೆ ಏಕಾರತಿಯನ್ನು ಮತ್ತೂ ದೀಪಗಳನ್ನು ಸಮರ್ಪಿಸುವೆನು."

ಶ್ರೀ ಪ್ರದ್ಯುಮ್ನಾಯ ನಮಃ. ಶೇಷ - ವರುಣ - ಧರಿಣೀ ಅಗ್ನಿಹಸ್ತೈಃ ದೀಪಂ ಸಮರ್ಪಯಾಮಿ.

## 13. ನೈವೇದ್ಯ

ನಿತ್ಯ ತೃಪ್ತನಾದ ನೀರಜಾಕ್ಷನಿಗೆ ನೈವೇದ್ಯವನ್ನು ಸಮರ್ಪಿಸಬೇಕು.

"ಕೊಟ್ಟುದನ್ನು ಕೈಕೊಂಬ ಕೈವಲ್ಯದಾತಾ! ನಾರಾಯಣಾ! ನಿನಗೆ ಲಕ್ಷ್ಮೀ ಹಸ್ತದಿಂದ ನೈವೇದ್ಯವನ್ನು ಸಮರ್ಪಿಸುತ್ತಿರುವೆನು."

ನಾರಾಯಣಾಯ ನಮಃ. ಲಕ್ಷ್ಮೀಹಸ್ತೇನ ನೈವೇದ್ಯಂ ಸಮರ್ಪಯಾಮಿ.

ಉದಾ : 1. ಆರೋಗಣೆ ಮಾಡೇಳಯ್ಯ-
2.ಫಲಹಾರವ ಮಾಡೋ ಪರಮ ಪುರುಷನೇ.

## 14. ಮಂಗಳಾರತಿ

ಮಂಗಳ ಮೂರುತಿಗೆ ಮಂಗಳಾರತಿಯನ್ನು ಹಾಡಬೇಕು.

"ಅಡ್ಡ ಬಿದ್ದ ಜನರ ವಿಘ್ನೋರಗಳನ್ನೆ ಕಳೆದು ದೊಡ್ಡವರ ಮಾಳ್ಪ ಮಂಗಳ ಮೂರ್ತಿಯಾದ ಓ ಶ್ರೀನಿವಾಸಾ! ಲಕ್ಷ್ಮೀಹಸ್ತದಿಂದ ನಿನಗೆ ಮಂಗಳಾರತಿಯನ್ನು ಬೆಳಗುತ್ತಿರುವೆನು.

ಶ್ರೀನಿವಾಸಾಯ ನಮಃ. ಲಕ್ಷ್ಮೀ ಹಸ್ತೇನ ಮಹಾ ನೀರಾಜನಂ ಸಮರ್ಪಯಾಮಿ.

ಉದಾ : 1. ಜಯಮಂಗಳಂ ನಿತ್ಯ ಶುಭಮಂಗಳಂ
2.ಮಂಗಳಂ ಮಂಗಳಂ ದಯಾನಿಧೇ
3. ಮಂಗಳಂ ವಿಶ್ವವ್ಯಾಪ್ತ ವಿಶ್ವ ಭಿನ್ನನಿಗೆ
4.ಮಂಗಳಂ ಮಂಗಳಂ ಮಂಗಳಂ.

## 15. ಲಾಲಿ

ಜಗತ್ಪ್ರಭುವಿಗೆ ಜೋಗುಳವನ್ನು ಹಾಡಬೇಕು.

"ವಟಪತ್ರ ಶಾಯಿಯಾದ ಶ್ರೀಕೃಷ್ಣಾ! ನಿನಗೆ ಲಾಲಿಸೇವೆಯನ್ನು ಸಮರ್ಪಿಸುವೆನು.

ಶ್ರೀಕೃಷ್ಣಾಯ ನಮಃ. ಲಾಲಿಸೇವಾಂ ಸಮರ್ಪಯಾಮಿ.

ಉದಾ : 1. ತೂಗಿರೆ ರಂಗನ ತೂಗಿರೆ ಕೃಷ್ಣನ
2. ಪವಳಿಸು ಪರಮಾತ್ಮನೇ ಸ್ವಾಮಿ.
3. ಲಾಲಿ ಪಾವನ ಚರಣ ಲಾಲಿ ಅಘಹರಣ.

## 16. ಸರ್ವ ಸಮರ್ಪಣೆ

ಅಂತರಾತ್ಮನ ಅಡಿದಾವರೆಗಳಲ್ಲಿ ಸರ್ವಕರ್ಮಗಳನ್ನು ಸಮರ್ಪಿಸಬೇಕು.

ಸರ್ವತಂತ್ರಸ್ವತಂತ್ರಾ! ಶ್ರೀನಿವಾಸಾ! ಪ್ರೇರ್ಯ ಪ್ರೇರಕನಾಗಿ ನನ್ನಲ್ಲಿ ನಿಂತು ನೀ ಮಾಡಿ ಮಾಡಿಸಿದ ಸರ್ವ ಕರ್ಮಗಳನ್ನು ನಿನ್ನ ಅಡಿದಾವರೆಗಳಲ್ಲಿ ಸಮರ್ಪಿಸುವೆನು.

ಶ್ರೀನಿವಾಸಾಯ ನಮಃ. ಸರ್ವ ಕರ್ಮಾಣಿ ಸಮರ್ಪಯಾಮಿ.

**ಉದಾ :** 1. ತನು ನಿನ್ನದು ಜೀವನ ನಿನ್ನದು.
2. ನಂದೇ ನದೋ ಸ್ವಾಮಿ ನಿಂದೇ ಇದೆಲ್ಲವೂ.
3. ನೆರೆನಂಬಿದೆ ಮದ್ ಹೃದಯ ಮಂಟಪದೋಳ್.

ಈ ರೀತಿ ಶ್ರೀಹರಿಗೆ ಷೋಡಶೋಪಚಾರಾತ್ಮಕ ಭಜನೆಯನ್ನು ಸಮರ್ಪಿಸಿ ಕೊನೆಯಲಿ --

## ಉಗಾಭೋಗ

ಕೋಟಿ ಕೋಟಿಗೆ ನಿನ್ನ ನಾಮವೊಂದೇ ಸಾಕು
ದಾಟಿಸುವುದು ಭವಸಾಗರವ
ಬೂಟಕ ತನದಲ್ಲಿ ಹರಿದಾಸನಾದರೆ
ತೋಟವಿಲ್ಲದೆ ಮೋಟಿ ಎತ್ತಿದಂತೆ
ನೀಟಾಗುವುದು ಕಾಣೆ ಎಂದಿಗು ಯಮಭಟರ

ಕಾಟವು ತಪ್ಪದು ಕಾಶಿಯೊಳಗಿದ್ದರು
ಹಾಟಕಾಂಬರಧಾರಿ ವಿಜಯವಿಠಲರೇಯ
ನಾಟಿಸೋ ನಿನ್ನ ಚರಣಾಬ್ಜದಲ್ಲಿ ಮನಸು

## ಉಗಾಭೋಗ

ಇಂದಿನ ದಿನವೇ ಶುಭದಿನವು
ಇಂದಿನ ವಾರ ಶುಭವಾರ
ಇಂದಿನ ಯೋಗ ಶುಭಯೋಗ
ಇಂದಿನ ಕರಣ ಶುಭಕರಣ
ಇಂದು ಶ್ರೀ ಪುರಂದರ ವಿಠಲನ ದರುಶನವೇ
ಸಂದರುಶನ ಶುಭದರ್ಶನ

## ಉಗಾಭೋಗ

ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ
ಇರಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ
ಎರಡರ ಬಾಧೆಗೆ ನಾನೊಳಗಾದೆನೊ ಪುರಂದರವಿಠಲಾ
ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ |

ಯಾನ್ಯೇವ ಕರ್ಮಾಣಿ ಮಯಾ ಕೃತಾನಿ
ತಾನ್ಯೇವ ತೇನ್ಯೈವ ಕೃತಾನಿ ನಿತ್ಯಂ
ಸುಖಾನಿ ದುಃಖಾನಿ ಭವಂತಿ ನಿತ್ಯಂ
ಸಮರ್ಪಿತವ್ಯಾನಿ ಗುರೋಃ ಪದಾಬ್ಜೇ |

ಎಂದು ಹೇಳಿ ಭಜನೆಯನ್ನು ಮುಗಿಸಬೇಕು. ಇದು ಹರಿದಾಸರು ತೋರಿಕೊಟ್ಟ ಶ್ರೀಹರಿಯ ಷೋಡಶೋಪಚಾರಾತ್ಮಕವಾದ ಭಜನಾಪದ್ಧತಿ. ಇದೇ ರೀತಿಯಲ್ಲಿ ಲಕ್ಷ್ಮೀ ಮೊದಲಾದ ದೇವತೆಗಳನ್ನೂ, ಯತಿಗಳನ್ನೂ, ದಾಸರುಗಳನ್ನೂ ಸ್ಮರಿಸಬೇಕು.

# ವಾರಗಳಲ್ಲಿ ಸ್ಮರಣೀಯಗಳಾದ ಭಗವದ್ರೂಪಗಳು

ಭಗವಂತನು ತನ್ನ ಸರ್ವ ರೂಪಗಳಿಂದ, ಸರ್ವಕಾಲಗಳಲ್ಲೂ, ಸರ್ವ ದೇಶಗಳಲ್ಲೂ ವ್ಯಾಪ್ತನಾಗಿ, ಸರ್ವ ಕರ್ಮಗಳನ್ನು ಮಾಡಲು ಸಮರ್ಥನಾಗಿರುವನು. ಆದಾಗ್ಯೂ ಸತ್ಯಸಂಕಲ್ಪನಾದ ಶ್ರೀಹರಿ ತನ್ನ ಒಂದೊಂದು ರೂಪದಿಂದ ಒಂದೊಂದು ಕಾರ್ಯದಲ್ಲಿ, ಪದಾರ್ಥದಲ್ಲಿ, ಕಾಲದಲ್ಲಿ, ದೇಶದಲ್ಲಿ, ವ್ಯಾಪ್ತನಾಗಿ, ಆ ರೂಪದಿಂದಲೇ ಆ ಕಾರ್ಯಕ್ಕೆ, ಆ ಪದಾರ್ಥಕ್ಕೆ, ಆ ಕಾಲಕ್ಕೆ, ಆ ದೇಶಕ್ಕೆ ನಿಯಾಮಕನಾಗಿರುವನು. ಇಂತಹ ಸ್ವಾಮಿಯನ್ನು ಆದಷ್ಟು ಪ್ರಯತ್ನಿಸಿ ಆ ಆ ಸಮಯಗಳಲ್ಲಿ ಆಯಾ ರೂಪಗಳನ್ನು ಚಿಂತಿಸಿ ಪೂಜಿಸಿದಲ್ಲಿ ವಿಶೇಷ-ಫಲವು ದೊರೆಯುವುದು.

ಮಾನ್ಯರಾದ ಸುಂದರವಿಠಲರು ತಮ್ಮ ಸದಾಚಾರ ಗ್ರಂಥದಲ್ಲಿ ವಾರಗಳಿಗೆ ನಿಯಾಮಕಗಳಾದ ಭಗವದ್ರೂಪಗಳನ್ನು ತಿಳಿಸುತ್ತಾ, ಆಯಾ ವಾರಗಳಲ್ಲಿ ಆದಷ್ಟು ಪ್ರಯತ್ನಿಸಿ, ಆ ವಾರಕ್ಕೆ ನಿಯಾಮಕವಾದ ಭಗವದ್ರೂಪಕ್ಕೆ ಸಂಬಂಧಿಸಿದ ಒಂದು ಹಾಡನ್ನಾದರೂ ಹೇಳಿ, ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಬೇಕೆಂದು ಸೂಚಿಸಿರುವರು.

## ವಾರನಿಯಾಮಕ ಭಗವದ್ರೂಪಗಳು

1. ಭಾನುವಾರ ............. ನಾರಾಯಣ.
2. ಸೋಮವಾರ ............. ನರಸಿಂಹ.
3. ಮಂಗಳವಾರ ............. ವೇದವ್ಯಾಸ.
4. ಬುಧವಾರ ............. ಪಾಂಡುರಂಗ.
5. ಗುರುವಾರ ............. ಸೀತಾರಾಮ.
6. ಶುಕ್ರವಾರ ............. ಶ್ರೀಕೃಷ್ಣ.
7. ಶನಿವಾರ ............. ಶ್ರೀ ವೇಂಕಟೇಶ.

ಪುರಂದರದಾಸರ ಕಾಲದಿಂದ ಸಾಗಿಬಂದ ಈ ಸುಂದರ ಭಜನಾಪದ್ಧತಿಯ ಪ್ರಕರಣಕ್ಕೆ ಶ್ರೀ ಗುರು ಜಗನ್ನಾಥ ದಾಸರ ಶಿಷ್ಯರಾದ ಗೋರಾಬಾಳ್ ಹನುಮಂತರಾಯರು ತಮ್ಮ ಸದಾಚಾರ ಗ್ರಂಥದಲ್ಲಿ ಿ ತಿವ ಮಾತುಗಳಿಂದಲೇ ಮಂಗಳವನ್ನು ಹಾಡೋಣ - "ಹೀಗೆ ನಿತ್ಯವಲ್ಲಿ ಭಕ್ತಿಯಿಂದ ಭಜನೆಯನ್ನು ಆಚರಿಸಿದರೆ, ಭಕ್ತಿಗೆ ಮೆಚ್ಚಿ ಗುರ್ವಂತರ್ಗತ ಗೋಪಾಲನು ಒಲಿಯುವನು."

"ಬಿಗಿದ ಕಂಠದಿಂ ದೃಗ್ಬಾಷ್ಪಗಳಿಂ - ನಗೆಮೊಗದಿಂ ರೋಮಗಳುಗಿದು | ಮಿಗೆ

ಸಂತೋಷದಿ ಚಿಗಿದಾಡುತ ನಾ - ಲ್ಮೊಗನಯ್ಯನ ಗುಣ ಪೊಗಳಿ ಹಿಗ್ಗುವುದೆ | ಫಲ ವಿದು ಬಾಳ್ವುದಕೆ" ಎಂಬ ಜಗನ್ನಾಥದಾಸರ ವಚನವನ್ನು ನಿತ್ಯ ಸ್ಮರಿಸಿ, ಹಾಡಿ, ಕುಣಿದಾಡಿ, ಜಿಗಿದಾಡಿ ಮೈಮರೆಯೋಣ.

ಗುರ್ವಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ
ಶ್ರೀ ಕೃಷ್ಣಾರ್ಪಣಮಸ್ತು

## ಸುಪ್ರಭಾತ ಭಜನೆ

ಆಚಾರ್ಯ ಮಧ್ವರು ತೋರಿದ ಪವಿತ್ರ ಹೆದ್ದಾರಿಯಲ್ಲಿ ಅನೇಕ ಬ್ರಹ್ಮಚಾರಿಗಳೂ, ಗೃಹಸ್ಥರೂ, ಯತಿಗಳೂ ಸಾಗಿ ಹೋಗಿದ್ದಾರೆ. ಎಲ್ಲರೂ ಮಹಿತಾತ್ಮರೇ, ಭಗವಂತನಿಗಾಗಿ ಜೀವನವನ್ನು ಮೀಸಲಾಗಿಸಿದವರು. ಎಲ್ಲರೂ ನಮ್ಮ ಪಾಲಿನ ದಾರಿದೀಪಗಳು. ಸಾಧನೆಯಲ್ಲಿ ನಮ್ಮನ್ನು ಮೀರಿನಿಂತ ಮಹಿತಾತ್ಮರು.

'ಅಪರೋಕ್ಷ' - 'ಅನಪರೋಕ್ಷ' ಇವೆರಡು ನಮ್ಮ ನಿಲುವಿಗೆ ನಿಲುಕದವುಗಳು. ಜ್ಞಾನಿಗಳನ್ನು ಗುರುತಿಸುವಲ್ಲಿ ಅಪರೋಕ್ಷ ಎಂದಿಗೂ ಅಳತೆಗೋಲಾಗಬಾರದು. "ಏ ಪುಟ್ಟಲೋ ಏ ಪಾಮುಂದೋ" ("ಯಾವ ಹುತ್ತಿನಲ್ಲಿ ಯಾವ ಹಾವಿದೆಯೋ") ಎಂಬ ತೆಲುಗು ನಾಣ್ನುಡಿ ಇಲ್ಲಿ ಸದಾ ಸ್ಮರಣೀಯವಾದುದು. ಎಲ್ಲ ಜ್ಞಾನಿಗಳು ತಮ್ಮ ನಡೆನುಡಿಗಳಿಂದ ಆತ್ಮೋದ್ಧಾರಕ್ಕೆ ಬೇಕಾಗುವ ಹಿತೋಪದೇಶವನ್ನು ನೀಡಿದ್ದಾರೆ. "ಬಾಲಾದಪಿ ಸುಖಂ ಗ್ರಾಹ್ಯಂ". ಮಕ್ಕಳಾಡಿದರೂ ಒಳ್ಳೆಯದನ್ನು ಗ್ರಹಿಸಬೇಕು. ಎಷ್ಟು ಸುಂದರ ಸಂದೇಶ! ಕಾಲದಿಂದಲೂ, ಸಾಧನೆಯಿಂದಲೂ, ಜ್ಞಾನ - ಭಕ್ತಿ - ವೈರಾಗ್ಯಗಳಿಂದಲೂ ವೃದ್ಧರೆನಿಸಿದ ಎಲ್ಲ ಹರಿದಾಸರು ನಮ್ಮಿಂದ ವಂದ್ಯರು. ಇದನ್ನು ಎಂದಿಗೂ ಮರೆಯ ಬಾರದು.

ಪ್ರಸ್ತುತ ಹೊತ್ತಿಗೆಯಲ್ಲಿ ಕೆಲಹರಿದಾಸರ ಹಾಗೂ ಯತಿಗಳ ಹೆಸರುಗಳನ್ನು ಮಾತ್ರ ತೆಗೆದುಕೊಂಡು, ಅವರಿಗೆ ಮಾತ್ರ ಸುಪ್ರಭಾತ ಹೇಳಿದೆ. ಇದು ಪೂರ್ಣವಲ್ಲ. ಕೇವಲ ಸುಪ್ರಭಾತಸೇವೆಯ ಕಿರುಪರಿಚಯಕ್ಕಾಗಿ ಅಳವಡಿಸಿದ ಕ್ರಮಮಾತ್ರ. ಹರಿದಾಸ ಬಂಧುಗಳು ತಮ್ಮ ಮನಸ್ಸನ್ನು ಸೆಳೆದ ಹಾಗೂ ತಮ್ಮ ಪ್ರಾಂತಕ್ಕೆ ಸೇರಿದ ಇತರ ಜ್ಞಾನಿವರೇಣ್ಯರನ್ನೂ ತಾರತಮ್ಯಕ್ಕನುಗುಣವಾಗಿ ಮಧ್ಯದಲ್ಲಿ ಸೇರಿಸಿಕೊಂಡು ಸ್ಮರಿಸಬಹುದು. ಯತಿಗಳ ತಾರತಮ್ಯವನ್ನು ಗುರುತಿಸುವಲ್ಲಿ ಆಶ್ರಮತೆಗೆದು ಕೊಂಡ ಸಂವತ್ಸರವು ಪ್ರಾಧಾನ್ಯತೆಯನ್ನು ಪಡೆಯುವುದು. ಆಶ್ರಮ ಜ್ಯೇಷ್ಠರು ಕೆಳಗಿನ ಯತಿಗಳಿಂದ ವಂದ್ಯರಾಗುವರು. ದಾಸರ ತಾರತಮ್ಯವನ್ನು ಅವರು ಹುಟ್ಟಿದ ಸಂವತ್ಸರದಿಂದ ನಿರ್ಣಯಿಸಬೇಕು.

# ಸುಪ್ರಭಾತ

ಪ್ರಕೃತ ಹೊತ್ತಿಗೆಯಲ್ಲಿ ಸುಪ್ರಭಾತಸೇವೆಯು ಆರೋಹಣಕ್ರಮದಲ್ಲಿದೆ. ಮೊದಲು ದಾಸಕಕ್ಷೆ, ಆಮೇಲೆ ಯತಿಗಳ ಕಕ್ಷೆ, ಕೊನೆಯಲ್ಲಿ ದೇವತಾಕಕ್ಷೆ; ಇದು ಕ್ರಮ.

## ದಾಸಕಕ್ಷೆ

### 1. ಶ್ರೀ ತಂದೆ ವೇಂಕಟೇಶ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ॥ಶ 1907 - 1982 |
| ವ್ಯವಹಾರನಾಮ | : | ರಾಮಚಂದ್ರರಾಯರು |
| ಅಂಕಿತ | : | ತಂದೆ ವೇಂಕಟೇಶವಿಠಲ |
| ಉಪದೇಶಗುರು | : | ಉರಗಾದ್ರಿವಾಸ ವಿಠಲರು |
| ಸ್ಥಳ | : | ಚಿತ್ರದುರ್ಗ |
| ಪುಣ್ಯತಿಥಿ | : | ಆಷಾಢಬಹುಳ ಅಷ್ಟಮಿ |

ಶ್ಲೋಕ || ಶ್ರೀ ಜಗನ್ನಾಥದಾಸಾರ್ಯ - ಪಾದಾಬ್ಜಮಧುಪಾಯಿನಂ |
ತಂದೆ ಶ್ರೀ ವೇಂಕಟೇಶಾಖ್ಯಂ - ನೌಮಿ ಶ್ರೀಪತಿ ಪ್ರೀತಯೇ ||

ತಂದೆ ವೇಂಕಟೇಶದಾಸ ಗುರುಭ್ಯೋ ನಮಃ; ವಃ ಸುಪ್ರಭಾತಂ.

ತಂದೆ ವೇಂಕಟೇಶದಾಸರೇ ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

### 2. ಅಭಿನವ ಪ್ರಾಣೇಶವಿಠಲದಾಸರು :

| | | |
|---|---|---|
| ಕಾಲ | : | ಕ್ರೀ॥ಶ 1903 - 1978 |
| ವ್ಯವಹಾರನಾಮ | : | ಹನುಮಂತರಾವ್ರ ಅರ್ಚಕ |
| ಅಂಕಿತ | : | ಅಭಿನವಪ್ರಾಣೇಶವಿಠಲ (ಸ್ವಪ್ನಲಬ್ಧ) |
| ಉಪದೇಶಗುರು | : | ಪ್ರಾಣೇಶದಾಸರು |
| ಸ್ಥಳ | : | ಲಿಂಗಸೂಗೂರು |
| ಪುಣ್ಯತಿಥಿ | : | ಪುಷ್ಯಬಹುಳ ಸಪ್ತಮಿ |

ಶ್ಲೋಕ || ವರದೇಂದ್ರಾರ್ಚಕಂ ಶಾಂತಂ - ಪ್ರಾಣೇಶಾರ್ಯಸುವಂಶಜಂ |
ಮಾಲೋಲ ಪದ ಸಂಸಕ್ತಂ - ಹನುಮಂತಾಭಿಧಂ ಭಜೇ ||

ಶ್ರೀ ಅಭಿನವ ಪ್ರಾಣೇಶ ವಿಠಲ ಗುರುಭ್ಯೋ ನಮಃ. ವಃ ಸುಪ್ರಭಾತಮ್. ಶ್ರೀ

| | | |
|---|---|---|
| ಅಂಕಿತ | : | ವರದೇಶವಿಠಲ |
| ಉಪದೇಶಗುರು | : | ಶ್ರೀ ಗುರುಜಗನ್ನಾಥ ವಿಠಲದಾಸರು |
| ಸ್ಥಳ | : | ಲಿಂಗಸೂಗೂರು |
| ಪುಣ್ಯತಿಥಿ | : | ಆಶ್ವೀಜ ಶುದ್ಧ ತದಿಯ |

ಶ್ಲೋಕ || ಕೌಶಿಕಾಚಾರ್ಯ ಸಂಪ್ರಾಪ್ತ - ಸದ್ವಿದ್ಯಾ ಸಂಪದಂ ಸದಾ |
ವರದೇಶಾಖ್ಯ ದಾಸಾರ್ಯಂ - ನೌಮಿ ರಾಮಾಂಗದಾಯಿತಂ ||

ಶ್ರೀ ವರದೇಶವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವರದೇಶ ವಿಠಲದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 8. ಶ್ರೀ ಹಸಿಗ್ಯಾಳು ಗೋವಿಂದದಾಸರು :

| | | |
|---|---|---|
| ಕಾಲ | : | ಕ್ರೀ||ಶ 1873 - 1915 |
| ವ್ಯವಹಾರನಾಮ | : | ಗೋವಿಂದ |
| ಅಂಕಿತ | : | ಗೋವಿಂದ ವಿಠಲ |
| ಉಪದೇಶಗುರು | : | ದಿನ್ನಿರಾಘಪ್ಪನವರು |
| ಸ್ಥಳ | : | ಹಸಿಗ್ಯಾಳು |
| ಪುಣ್ಯತಿಥಿ | : | ಭಾದ್ರಪದ ಶುದ್ಧ ಪಂಚಮಿ |

ಶ್ಲೋಕ || ಭಜೇ ಗೋವಿಂದದಾಸಾರ್ಯಂ - ಭವತಾಪಾಪನೋದಯೋ
ಯೇನ ಪ್ರಣೀತಾ ಲಾವಣೀ - ಸಂಘ ಸಂಸ್ಕಾರ ಕಾರಿಣೀ ||

ಶ್ರೀ ಹಸಿಗ್ಯಾಳು ಗೋವಿಂದದಾಸ ಗುರುಭ್ಯೋನಮಃ. ವಃ ಸುಪ್ರಭಾತಮ್.

ಶ್ರೀ ಹಸಿಗ್ಯಾಳು ಗೋವಿಂದದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 9. ಶ್ರೀ ವರದವಿಠಲದಾಸರು :

| | | |
|---|---|---|
| ಕಾಲ | : | ಕ್ರೀ||ಶ 1872 - 1935 |
| ವ್ಯವಹಾರನಾಮ | : | ಹನುಮಂತರಾಯರು |
| ಅಂಕಿತ | : | ವರದವಿಠಲ |
| ಉಪದೇಶಗುರು | : | ಶ್ರೀ ಗುರುಜಗನ್ನಾಥ ವಿಠಲದಾಸರು |
| ಸ್ಥಳ | : | ಕವಿತಾಳ |
| ಪುಣ್ಯತಿಥಿ | : | ಕಾರ್ತೀಕ ಶುದ್ಧ ಚತುರ್ದಶಿ |

ಶ್ಲೋಕ || ಗುರುಪೂರ್ವ ಜಗನ್ನಾಥ - ದಾಸಾರ್ಯ ಪದಸೇವಕಂ
ಕೌತಾಳ ಪುರವಾಸ್ತವ್ಯಂ - ವಂದೇ ವರದವಿಠಲಂ ||

ಶ್ರೀ ವರದವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವರದ ವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 10. ಶ್ರೀ ಉರಗಾದ್ರಿವಾಸ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ||ಶ 1871 - 1964 |
| ವ್ಯವಹಾರನಾಮ | : | ಶ್ರೀನಿವಾಸರಾಯರು |
| ಅಂಕಿತ | : | ಉರಗಾದ್ರಿವಾಸವಿಠಲ |
| ಉಪದೇಶಗುರು | : | ತಂದೆ ಮುದ್ದು ಮೋಹನ ವಿಠಲದಾಸರು |
| ಸ್ಥಳ | : | ಚಿತ್ರದುರ್ಗ |
| ಪುಣ್ಯತಿಥಿ | : | ಕಾರ್ತೀಕ ಬಹುಳ ದ್ವಾದಶಿ |

ಶ್ಲೋಕ || ಚಕ್ರಾಬ್ಜಮಂಡಲಸ್ಥಂ ತಂ - ಚಕ್ರಪಾಣಿಂ ಪ್ರಭುಂ ಸದಾ |
ಯೋಽಭಜತ್ ಶ್ರೀನಿವಾಸಾಖ್ಯಂ - ತಂ ವಂದೇ ದಾಸಪುಂಗವಂ ||

ಶ್ರೀ ಉರಗಾದ್ರಿವಾಸ ವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಉರಗಾದ್ರಿವಾಸ ವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 11. ತಂದೆ ಮುದ್ದು ಮೋಹನ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ||ಶ 1865 - 1940 |
| ವ್ಯವಹಾರನಾಮ | : | ಸುಬ್ಬರಾಯರು |
| ಅಂಕಿತ | : | ತಂದೆ ಮುದ್ದು ಮೋಹನ |
| ಉಪದೇಶಗುರು | : | ಮುದ್ದು ಮೋಹನದಾಸರು |
| ಸ್ಥಳ | : | ಕರಿಗಿರಿ |
| ಪುಣ್ಯತಿಥಿ | : | ಚೈತ್ರಶುದ್ಧ ನವಮಿ |

ಶ್ಲೋಕ || ಮುದ್ದು ಮೋಹನ ದಾಸಾರ್ಯ - ಪಾದಶಿಷ್ಯಂ ಮಹಾಮತಿಂ |
ವೈರಾಗ್ಯಾದಿ ಗುಣೋಪೇತಂ - ಸುಬ್ಬರಾಯ ಗುರುಂ ಭಜೇ ||

ಶ್ರೀ ತಂದೆಮುದ್ದುಮೋಹನದಾಸಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ತಂದೆಮುದ್ದುಮೋಹನದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 12. ಶ್ರೀ ಆನಂದವಿಠಲದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1869 - 1918 |
| ವ್ಯವಹಾರನಾಮ | : | ಕುಲಕರ್ಣಿ ರಾಮರಾಯರು |
| ಅಂಕಿತ | : | ಆನಂದವಿಠಲ |
| ಉಪದೇಶಗುರು | : | ಶ್ರೀ ಗುರುಜಗನ್ನಾಥವಿಠಲದಾಸರು |
| ಸ್ಥಳ | : | ಲಿಂಗಸೂಗೂರು |
| ಪುಣ್ಯತಿಥಿ | : | ಆಶ್ವೀಜ ಶುದ್ಧ ದ್ವಿತೀಯ |

ಶ್ಲೋಕ || ದಾಸವರ್ಯ ಕುಲೋತ್ಪನ್ನಂ - ವರದೇಂದ್ರಾರ್ಚಕಂ ಸದಾ |
ಆನಂದವಿಠಲಂ ವಂದೇ - ಸ್ವಾಮಿರಾಯಾರ್ಯ ಭಾತ್ರಕಂ ||

ಶ್ರೀ ಆನಂದವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಆನಂದವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 13. ಶ್ರೀ ಜಯೇಶ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1850 - 1932 |
| ವ್ಯವಹಾರನಾಮ | : | ಅಟ್ನಾಜಿ ವೇಂಕಟರಾಯರು |
| ಅಂಕಿತ | : | ಜಯೇಶವಿಠಲ |
| ಉಪದೇಶಗುರು | : | ವಿಜಯರಾಮಚಂದ್ರ ವಿಠಲದಾಸರು |
| ಸ್ಥಳ | : | ಮೈಸೂರು |
| ಪುಣ್ಯತಿಥಿ | : | ವೈಶಾಖ ಬಹುಳ ದ್ವಿತೀಯ |

ಶ್ಲೋಕ || ಜಯೇಶವಿಠಲಂದಾಸಂ - ಇಭರಾಮ ಗುರೋಃ ಪ್ರಿಯಂ |
ಶ್ರೀಕೃಷ್ಣಪದ ಸದ್ಭಕ್ತಂ - ವಂದೇ ಸುಜ್ಞಾನ ಸಿದ್ಧಯೇ ||

ಶ್ರೀ ಜಯೇಶವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಜಯೇಶವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 14. ಶ್ರೀ ಗುರುಜಗನ್ನಾಥ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1837 - 1918 |
| ವ್ಯವಹಾರನಾಮ | : | ಸ್ವಾಮಿರಾಯಾಚಾರ್ಯರು |
| ಅಂಕಿತ | : | ಗುರುಜಗನ್ನಾಥವಿಠಲ |
| ಉಪದೇಶಗುರು | : | ಪೆತ್ತತಂದೆ ಗೋಪಾಲ ವಿಠಲರು. |
| ಸ್ಥಳ | : | ಕವಿತಾಳ |
| ಪುಣ್ಯತಿಥಿ | : | ಆಶ್ವೀಜ ಬಹುಳ ಪಾಡ್ಯ |

ಶ್ಲೋಕ || ಗುರುಪೂರ್ವ ಜಗನ್ನಾಥ - ದಾಸಸ್ವಾಮಿತ ತೇಜಸಃ |
ತಸ್ಯಪಾದಾಬ್ಜ ಸಂಭೂತಾಃ - ರಜಾಂಸಿ ಶಿರಸಾವಹೇ||

ಶ್ರೀ ಗುರುಜಗನ್ನಾಥದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀ ಗುರುಜಗನ್ನಾಥದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ

ರಾಗ - ತಾಳ -

ಏಳು ಗುರುಜಗನ್ನಾಥರಾಯ ಎಷ್ಟು ನಿದ್ರೆ ನಿಮ್ಮ
ಧೂಳಿದರ್ಶನ ಕೊಡುವ ವ್ಯಾಳ್ಯ ಶಿಷ್ಯರಿಗೆ || ಪ ||

ಶುದ್ಧ ಉದಯದಲಿ ಎದ್ದು ಪೃಥ್ವಿ ಪಾವನ ಮಾಡಿ
ಅಷ್ಟೋತ್ತರ ಜಪವ ಭಕ್ತಿಯಲಿ ಮಾಡೀ
ಮತ್ತೆ ಗುರುರಾಯರ ಚರಣಗಳ ಕೊಂಡಾಡಿ ನಿಮ್ಮ
ಭೃತ್ಯರೆಬ್ಬಿಸುತಾರೆ ತಡಮಾಡ ಬ್ಯಾಡಿ || ೧ ||

ಅಧಮನೆಬ್ಬಿಸುವೆ ಒಂದು ಅಧಿಕಾರವೆನಗಿಲ್ಲ
ಆದರೂ ಚಿಂತಿಲ್ಲ ದಯಮಾಡ ಬೇಕಲ್ಲ
ಪಾಮರನ ಧ್ವನಿಯ ಲಾಲಿಸಿ ಕೇಳಬೇಕಲ್ಲ
ಪಾದದರ್ಶನವ ಬೇಡುವರು ಜನರೆಲ್ಲ || ೨ ||

ಮಧ್ವರಾಯರ ಸ್ತೋತ್ರ ಮಾಡಲೀ ಬೇಕು
ಮುದ್ದು ಗುರುರಾಯನ ಪ್ರಾರ್ಥಿಸಲಿ ಬೇಕು
ಸಿದ್ಧಾಂತವ ಜನಕೆ ತಿದ್ದಿ ತಿಳಿಸಲಿ ಬೇಕು
ಮಧ್ವವಲ್ಲಭನ ಗುರುತು ತೋರಿಸಲಿ ಬೇಕು || ೩ ||

ಭಾಷ್ಯ ಭಾಗವತಕ್ಕೆ ವ್ಯಾಖ್ಯಾನ ವಾಗಲಿ ಬೇಕು
ಹರಿಕಥಾಮೃತಸಾರದರ್ಥವ ಬರೆಯಲೀ ಬೇಕು
ವರಶುದ್ಧ ಶಾಸ್ತ್ರದ ಮರ್ಮವ ತಿಳಿಸಲೀ ಬೇಕು
ಹರಿಭಕ್ತರ ಸಂಗ ಎಮಗೀಯಲೀ ಬೇಕು || ೪ ||

ಜ್ಞಾನವಂತನೆ ನಿನ್ನ ಧ್ಯಾನ ನಮಗೀಯಲಿ ಬೇಕು
ಹೀನಪಾಮರರ ಪಾವನ ಮಾಡಲೀ ಬೇಕು
ತಂದೆ ಅಪರಾಧಗಳ ನೀ ಕ್ಷಮಿಸಲೀ ಬೇಕು
ತಂದು ಶ್ರೀನಿವಾಸನ ನಮಗೆ ತೋರಿಸಲಿ ಬೇಕು || ೫ ||

## 15. ಶ್ರೀ ಮುದ್ದುಮೋಹನ ವಿಠಲದಾಸರು :

| | | |
|---|---|---|
| ಕಾಲ | : | ಕ್ರಿ||ಶ 1830 - 1898 |
| ವ್ಯವಹಾರನಾಮ | : | ರಾಘವೇಂದ್ರದಾಸರು |
| ಅಂಕಿತ | : | ಮುದ್ದುಮೋಹನ ವಿಠಲ |
| ಉಪದೇಶಗುರು | : | ಶ್ರೀವರವಿಠಲರು |
| ಸ್ಥಳ | : | ದೊಡ್ಡ ಬಳ್ಳಾಪುರ |
| ಪುಣ್ಯತಿಥಿ | : | ಕಾರ್ತೀಕ ಬಹುಳ ಚತುರ್ದಶಿ |

ಶ್ಲೋಕ || ರಾಘವೇಂದ್ರಾಖ್ಯ ದಾಸಾರ್ಯಂ - ಬಳ್ಳಾಪುರನಿವಾಸಿನಂ |
ವಿಠಲಾರಾಧಕಂ ನಿತ್ಯಂ - ವಂದೇ ಸಚ್ಛಾಸ್ತ್ರಕೋವಿದಂ ||

ಶ್ರೀ ಮುದ್ದುಮೋಹನದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀ ಮುದ್ದುಮೋಹನದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 16. ಶ್ರೀ ವರವಿಠಲದಾಸರು :

| | | |
|---|---|---|
| ಕಾಲ | : | ಕ್ರಿ||ಶ 1823 - 1873 |
| ವ್ಯವಹಾರನಾಮ | : | ರಾಮಚಂದ್ರರಾವು |
| ಅಂಕಿತ | : | ಶ್ರೀವರವಿಠಲ |
| ಉಪದೇಶಗುರು | : | ಶ್ರೀನಿಧಿವಿಠಲರು (ಅಣ್ಣಯ್ಯಾಚಾರ್ಯರು) |
| ಸ್ಥಳ | : | ಧಾರವಾಡ |
| ಪುಣ್ಯತಿಥಿ | : | ಶ್ರಾವಣಶುದ್ಧ ದ್ವಾದಶಿ |

ಶ್ಲೋಕ || ಅಣ್ಣಯ್ಯಾರ್ಯ ಗುರೋಃ ಶಿಷ್ಯಂ - ಸದಾ ಶ್ರೀಹರಿ ಸೇವಕಂ |
ವೈರಾಗ್ಯ ಭಾಗ್ಯ ಸಂಪನ್ನಂ - ರಾಮಚಂದ್ರ ಗುರುಂ ಭಜೇ ||

ಶ್ರೀ ವರವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀ ವರವಿಠಲದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 17. ಹರಪನಹಳ್ಳಿ ಭೀಮವ್ವನವರು :

| | | |
|---|---|---|
| ಕಾಲ | : | ಕ್ರೀ||ಶ 1822 - 1903 |
| ವ್ಯವಹಾರನಾಮ | : | ಭೀಮವ್ವ |
| ಅಂಕಿತ | : | ಭೀಮೇಶಕೃಷ್ಣ (ಸ್ವಪ್ನಲಬ್ಧ) |
| ಉಪದೇಶಗುರು | : | ನಾರದರು (ಸ್ವಪ್ನ) |
| ಸ್ಥಳ | : | ಹರಪನಹಳ್ಳಿ |
| ಪುಣ್ಯತಿಥಿ | : | ಪುಷ್ಯಶುದ್ಧ ತ್ರಯೋದಶಿ |

ಶ್ಲೋಕ || ನಾರದಾದಾಪ್ತ ಸದ್ಬೋಧಾಂ - ಸಾಧ್ವೀಂ ಸಾಹಿತ್ಯ ಕಾರಿಣೀಂ |
ಭೀಮೇಶ ಕೃಷ್ಣ ನಿರತಾಂ - ವಂದೇ ಭೀಮವ್ವ ಮಾತರಂ ||

ಭೀಮವ್ವ ಮಾತ್ರೇ ನಮಃ. ವಃ ಸುಪ್ರಭಾತಂ.

ಭೀಮವ್ವಾ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 18. ಶ್ರೀಶ ಪ್ರಾಣೇಶ ವಿಠಲದಾಸರು :

| | | |
|---|---|---|
| ಕಾಲ | : | ಕ್ರೀ||ಶ 1807 - 1892 |
| ವ್ಯವಹಾರನಾಮ | : | ರಾಮದಾಸರು |
| ಅಂಕಿತ | : | ಶ್ರೀಶ ಪ್ರಾಣೇಶವಿಠಲ |
| ಉಪದೇಶಗುರು | : | ಗುರುಪ್ರಾಣೇಶದಾಸರು |
| ಸ್ಥಳ | : | ಲಿಂಗಸೂಗೂರು |
| ಪುಣ್ಯತಿಥಿ | : | ಭಾದ್ರಪದ ಶುದ್ಧ ಅಷ್ಟಮಿ |

ಶ್ಲೋಕ || ಈಶ ಕಥಾ ಪ್ರವಕ್ತಾರಂ - ರಾಘವೇಂದ್ರ ಗುರೋಃ ಪ್ರಿಯಂ
ದಾಸವರ್ಯಂ ದಯಾಯುಕ್ತಂ - ರಾಮದಾಸ ಗುರುಂ ಭಜೇ ||

ಶ್ರೀಶ ಪ್ರಾಣೇಶ ವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀಶ ಪ್ರಾಣೇಶ ವಿಠಲದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 19. ಮೊದಲಕಲ್ಲು ಶೇಷದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1806 - 1885 |
| ವ್ಯವಹಾರನಾಮ | : | ಶೇಷದಾಸರು |
| ಅಂಕಿತ | : | ಗುರುವಿಜಯವಿಠಲ (ಸ್ವಪ್ನಲಬ್ಧ) |
| ಉಪದೇಶಗುರು | : | ವಿಜಯದಾಸರು (ಸ್ವಪ್ನ) |
| ಸ್ಥಳ | : | ಮೊದಲಕಲ್ಲು |
| ಪುಣ್ಯತಿಥಿ | : | ವೈಶಾಖ ಶುದ್ಧ ಅಷ್ಟಮಿ |

ಶ್ಲೋಕ || ಶ್ರೀಶಾಂಘ್ರಿ ಸೇವಕಂ ನಿತ್ಯಂ - ಭೂಸುರಾಗ್ರಕುಲೋದ್ಭವಂ |
ಶ್ರೀ ಸಮೀರ ಪದಾಸಕ್ತಂ - ಶೇಷದಾಸ ಗುರುಂ ಭಜೇ ||

ಶ್ರೀ ಮೊದಲಕಲ್ಲು ಶೇಷದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಮೊದಲಕಲ್ಲು ಶೇಷದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 20. ಶ್ರೀ ಇಭರಾಮಪುರದ ಅಪ್ಪ ಅವರು :

| | | |
|---|---|---|
| ಕಾಲ | : | ಕ್ರೀ\|\|ಶ 1789 - 1869 |
| ವ್ಯವಹಾರನಾಮ | : | ಇಭರಾಮಪುರದ ಕೃಷ್ಣಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಗುರುರಾಘವೇಂದ್ರತೀರ್ಥರು (ಸ್ವಪ್ನ) |
| ಸ್ಥಳ | : | ಇಭರಾಮಪುರ |
| ಪುಣ್ಯತಿಥಿ | : | ಶ್ರಾವಣ ಶುದ್ಧ ತೃತೀಯ |

ಶ್ಲೋಕ || ಹನುಮಂತಾರ್ಚಕಂ ಸೌಮ್ಯಂ - ರಾಘವೇಂದ್ರ ಗುರೋಃ ಪ್ರಿಯಂ |
ಅಪ್ಪೇತಿ ನಾಮ್ನಾ ವಿಖ್ಯಾತಂ - ಕೃಷ್ಣಾಚಾರ್ಯ ಗುರುಂ ಭಜೇ ||

ಇಭರಾಮಪುರ ಕೃಷ್ಣಾಚಾರ್ಯ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಇಭರಾಮ ಪುರದ ಕೃಷ್ಣಾಚಾರ್ಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 21. ಶ್ರೀ ಕಮಲೇಶವಿಠಲದಾಸರು :

| | | |
|---|---|---|
| ಾಲ | : | ಕ್ರೀ\|\|ಶ 1780 |
| ್ಯವಹಾರನಾಮ | : | ಆನಂದದಾಸರು |
| ಂಕಿತ | : | ಕಮಲೇಶವಿಠಲ |
| ುಪದೇಶಗುರು | : | ಕೇಶವವಿಠಲದಾಸರು |
| ್ಥಳ | : | ಸುರಪುರ |
| ್ಣ್ಯತಿಥಿ | : | ಭಾದ್ರಪದಶುದ್ಧ ದ್ವಾದಶಿ |

ಶ್ಲೋಕ || ಶ್ರೀ ರಾಘವೇಂದ್ರ ಪಾದಾಬ್ಜ - ಮಧುಪಾಯಿತ ಮಾನಸಂ |
ಆನಂದದಾಸ ಮೀಡೇಹಂ - ದೇವಪಟ್ಟಣ ವಾಸಿನಂ ||

ಶ್ರೀ ಕಮಲೇಶ ವಿಠಲ ದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಕಮಲೇಶ ವಿಠಲದಾಸರೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾ ತವಾಗಲಿ.

## 22. ಶ್ರೀ ಗುರುಪ್ರಾಣೇಶ ವಿಠಲದಾಸರು :

| | | |
|---|---|---|
| ಾಲ | : | ಕ್ರೀ\|\|ಶ 1785 - 1860 |
| ್ಯವಹಾರನಾಮ | : | ವೇಂಕಟದಾಸರು |
| ಂಕಿತ | : | ಗುರುಪ್ರಾಣೇಶವಿಠಲ |
| ುಪದೇಶಗುರು | : | ಪ್ರಾಣೇಶ ದಾಸರು |
| ್ಥಳ | : | ಲಿಂಗಸೂಗೂರು |
| ್ಣ್ಯತಿಥಿ | : | ಮಾಘಬಹುಳ ಅಮಾವಾಸ್ಯ |

ಶ್ಲೋಕ || ಗುರುಭಕ್ತಿಮತಾಂ ಶ್ರೇಷ್ಠಂ - ಗುರುಪಾದಾವಲಂಬಿನಂ |
ಗುರೂಪದಿಷ್ಟ ಮಾರ್ಗಸ್ಥಂ - ಗುರುಪ್ರಾಣೇಶಮಾಶ್ರಯೇ ||

ಶ್ರೀ ಗುರುಪ್ರಾಣೇಶ ವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಗುರುಪ್ರಾಣೇಶ ವಿಠಲದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 23. ಶ್ರೀ ಅಭಿನವ ಜನಾರ್ದನ ವಿಠಲದಾಸರು :

| | | |
|---|---|---|
| ಾಲ | : | ಕ್ರೀ\|\|ಶ1800 |
| ್ಯವಹಾರನಾಮ | : | ಪ್ರೇಮದಾಸರು |
| ಂಕಿತ | : | ಅಭಿನವಜನಾರ್ದನವಿಠಲ |

ಉಪದೇಶಗುರು : ಜನಾರ್ದನ ವಿಠಲದಾಸರು
ಸ್ಥಳ :
ಪುಣ್ಯತಿಥಿ :

ಶ್ಲೋಕ || ಜನಾರ್ದನಪದಾಸಕ್ತಂ - ಜಗನ್ನಾಥ ಗುರೋಃ ಪ್ರಿಯಂ
ರಾಘವೇಂದ್ರಾದ್ವಾಪ್ತ ಸೌಖ್ಯಂ - ಪ್ರೇಮದಾಸ ಗುರುಂಭಜೇ ||

ಶ್ರೀ ಅಭಿನವ ಜನಾರ್ದನ ವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಅಭಿನವಜನಾರ್ಧನದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 24. ಶ್ರೀದವಿಠಲದಾಸರು :

ಕಾಲ : ಕ್ರೀ||ಶ 1741 - 1820
ವ್ಯವಹಾರನಾಮ : ದಾಸಪ್ಪ
ಅಂಕಿತ : ಶ್ರೀದವಿಠಲ
ಉಪದೇಶಗುರು : ಶ್ರೀ ಜಗನ್ನಾಥದಾಸರು
ಸ್ಥಳ : ಕರ್ಜಗಿ
ಪುಣ್ಯತಿಥಿ : ಆಷಾಢ ಶುಕ್ಲ ಪ್ರಥಮೈಕಾದಶಿ

ಶ್ಲೋಕ || ಫಲಸ್ತುತಿ ಪ್ರವಕ್ತಾರಂ - ಜಗನ್ನಾಥಾರ್ಯ ಸೇವಕಂ
ಶ್ರೀ ಕೃಷ್ಣ ಪದಸದ್ಭಕ್ತಂ - ವಂದೇ ಶ್ರೀ ಶ್ರೀದವಿಠಲಂ ||

ಶ್ರೀದವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀದವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 25. ಶ್ರೀ ಗುರುಶ್ರೀಶವಿಠಲದಾಸರು :

ಕಾಲ : ಕ್ರೀ||ಶ 1740 - 1846
ವ್ಯವಹಾರನಾಮ : ಕುಂಟೋಜಿ ನರಸಿಂಹದಾಸರು
ಅಂಕಿತ : ಗುರುಶ್ರೀಶವಿಠಲ
ಉಪದೇಶಗುರು : ಶ್ರೀಶವಿಠಲರು (ಹುಂಡೇಕಾರದಾಸರು)
ಸ್ಥಳ : ಕನಕಗಿರಿ
ಪುಣ್ಯತಿಥಿ : ಮಾರ್ಗಶಿರ ಬಹುಳ ಅಮಾವಾಸ್ಯ

ಶ್ರೀ ಜಗನ್ನಾಥದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಜಗನ್ನಾಥದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 28. ಶ್ರೀ ಮೋಹನದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1728 - 1751 |
| ವ್ಯವಹಾರನಾಮ | : | ಮೋಹನ |
| ಅಂಕಿತ | : | ಮೋಹನವಿಠಲ |
| ಉಪದೇಶಗುರು | : | ವಿಜಯದಾಸರು |
| ಸ್ಥಳ | : | ಚಿಪ್ಪಗಿರಿ |
| ಪುಣ್ಯತಿಥಿ | : | ಜ್ಯೇಷ್ಠಶುದ್ಧ ಷಷ್ಠಿ |

ಶ್ಲೋಕ || ಚಿಪ್ಪಶೈಲಗುರೋಃ ಪುತ್ರಂ - ಗುರುಭಕ್ತಿ ಪರಾಯಣಂ |
ವಂದೇ ವೈರಾಗ್ಯ ಸಂಪ್ರಾಪ್ತ್ಯೈ - ಮೋಹನಾರ್ಯಂ ಸುಮೋಹಕಂ ||

ಶ್ರೀ ಮೋಹನದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಮೋಹನದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 29. ಶ್ರೀ ಗೋಪಾಲದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1722 - 1762 |
| ವ್ಯವಹಾರನಾಮ | : | ಭಾಗಣ್ಣ |
| ಅಂಕಿತ | : | ಗೋಪಾಲವಿಠಲ, ವೇಂಕಟಕೃಷ್ಣ |
| ಉಪದೇಶಗುರು | : | ವಿಜಯರಾಯರು |
| ಸ್ಥಳ | : | ಉತ್ತನೂರು |
| ಪುಣ್ಯತಿಥಿ | : | ಪುಷ್ಯ ಬಹುಳ ಅಷ್ಟಮಿ. |

ಶ್ಲೋಕ || ಗೋಪಪ್ರಖರ ಸಂಕಾಶಂ - ಗೋಪಾಲಾರ್ಚನ ತತ್ಪರಂ |
ಗೋದೇವ ವಂದ್ಯಪಾದಾಬ್ಜಂ - ಗೋಪಾಲಾಖ್ಯ ಗುರುಂ ಭಜೇ ||

ಶ್ರೀ ಗೋಪಾಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಗೋಪಾಲದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 30. ಶ್ರೀ ವ್ಯಾಸ ವಿಠಲ ದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ ಸುಮಾರು 1775 |
| ವ್ಯವಹಾರನಾಮ | : | ಕಲ್ಲೂರು ಸುಬ್ಬಣ್ಣದಾಸರು |
| ಅಂಕಿತ | : | ವ್ಯಾಸವಿಠಲ |
| ಉಪದೇಶಗುರು | : | ವೇಣುಗೋಪಾಲದಾಸರು (ವಂಗನಾಮ ತಿಮ್ಮಣ್ಣ ದಾಸರು) |
| ಸ್ಥಳ | : | ಕಲ್ಲೂರು |
| ಪುಣ್ಯತಿಥಿ | : | |

ಶ್ಲೋಕ || ಶ್ರೀಮನ್ನ್ಯಾಯ ಸುಧಾಸ್ವಾದ - ಮತ್ತ ಚಿತ್ತಂ ಮಹಾಮತಿಂ |
ವಿಜಯಾರ್ಯಪ್ರಿಯಂ ವಂದೇ - ವ್ಯಾಸವಿಠಲನಾಮಕಂ ||

ಶ್ರೀ ವ್ಯಾಸ ವಿಠಲದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವ್ಯಾಸ ವಿಠಲದಾಸರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 31. ಶ್ರೀ ನರಸಿಂಹವಿಠಲದಾಸರು :

| | | |
|---|---|---|
| ಕಾಲ | : | ಕ್ರೀ\|\|ಶ 1685 - 1765 |
| ವ್ಯವಹಾರನಾಮ | : | ನರಸಿಂಹದಾಸರು |
| ಅಂಕಿತ | : | ನರಸಿಂಹವಿಠಲ |
| ಉಪದೇಶಗುರು | : | ಪುರಂದರದಾಸರು (ಸ್ವಪ್ನ) |
| ಸ್ಥಳ | : | ಬ್ಯಾಗವಾಟಿ |
| ಪುಣ್ಯತಿಥಿ | : | ಮಾರ್ಗಶಿರ ಬಹುಳ ಷಷ್ಠಿ |

ಸುಮತೀಂದ್ರ ಗುರೋಃ ಶಿಷ್ಯಂ - ಉಪೇಂದ್ರೈರ್ಮಾನಿತಂ ಮುದಾ |
ಪಿತರಂ ರಂಗದಾಸಸ್ಯ - ನಾರಸಿಂಹಾಭಿಧಂ ಭಜೇ ||

ಶ್ರೀ ನರಸಿಂಹ ದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀ ನರಸಿಂಹದಾಸರೇ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾ ಗಲಿ.

## 32.ಶ್ರೀ ವಿಜಯದಾಸರು :

| | | |
|---|---|---|
| ಕಾಲ | : | ಕ್ರೀ\|\| ಶ 1682 - 1755 |
| ವ್ಯವಹಾರನಾಮ | : | ದಾಸಪ್ಪ |

| | | |
|---|---|---|
| ಅಂಕಿತ | : | ವಿಜಯವಿಠಲ |
| ಉಪದೇಶಗುರು | : | ಪುರಂದರದಾಸರು (ಸ್ವಪ್ನ) |
| ಸ್ಥಳ | : | ಚಿಪ್ಪಗಿರಿ |
| ಪುಣ್ಯತಿಥಿ | : | ಕಾರ್ತೀಕ ಶುದ್ಧ ದಶಮಿ. |

ಶ್ಲೋಕ || ಅಜ್ಞಾನ ತಿಮಿರಚ್ಛೇದಂ - ಬುದ್ಧಿ ಸಂಪತ್ಪ್ರದಾಯಕಂ |
ವಿಜ್ಞಾನ ವಿಮಲಂ ಶಾಂತಂ - ವಿಜಯಾಖ್ಯ ಗುರುಂ ಭಜೇ ||

ಶ್ರೀ ವಿಜಯದಾಸ ಗುರುಭ್ಯೋ ನಮಃ. ವಃ ಸುಪ್ರಭಾತಂ.

ಶ್ರೀ ವಿಜಯದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 33. ಶ್ರೀ ಪ್ರಸನ್ನ ವೇಂಕಟದಾಸರು :

| | | |
|---|---|---|
| ಕಾಲ | : | ಕ್ರೀ||ಶ 1680 - 1752 |
| ವ್ಯವಹಾರನಾಮ | : | ವೆಂಕಪ್ಪಯ್ಯ |
| ಅಂಕಿತ | : | ಪ್ರಸನ್ನವೇಂಕಟ |
| ಉಪದೇಶಗುರು | : | ಶ್ರೀನಿವಾಸ (ಸ್ವಪ್ನ) |
| ಸ್ಥಳ | : | ಬಾದಾಮಿ |
| ಪುಣ್ಯತಿಥಿ | : | ಭಾದ್ರಪದ ಶುದ್ಧ ದ್ವಾದಶಿ |

ಶ್ಲೋಕ || ಶ್ರೀಶಾಂಘ್ರಿದೃಷ್ಟ ಸುವಿಜ್ಞಾನಂ - ಶ್ರೀಶೈಕ ನಿರತಂ ಸದಾ|
ಪ್ರಸನ್ನ ವೇಂಕಟಾರ್ಯೋಽಮೋ - ಭೂಯಾತ್ ಸರ್ವಾರ್ಥ ಸಿದ್ಧಯೇ||

ಶ್ರೀ ಪ್ರಸನ್ನ ವೇಂಕಟದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಪ್ರಸನ್ನ ವೇಂಕಟದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 34. ಹೆಳವನಕಟ್ಟೆ ಗಿರಿಯಮ್ಮ :

| | | |
|---|---|---|
| ಕಾಲ | : | ಕ್ರೀ||ಶ ಸುಮಾರು 1750 |
| ವ್ಯವಹಾರನಾಮ | : | ಗಿರಿಯಮ್ಮ |
| ಅಂಕಿತ | : | ಹೆಳವನಕಟ್ಟೆರಂಗ |
| ಉಪದೇಶಗುರು | : | ಹೆಳವನಕಟ್ಟೆ ರಂಗ (ಸ್ವಪ್ನ) |
| ಸ್ಥಳ | : | ಕೋಮಾರನ ಹಳ್ಳಿ |
| ಪುಣ್ಯತಿಥಿ | : | |

ಶ್ಲೋಕ || ರಂಗನಾಥ ಪದಾಸಕ್ತಾಂ - ರಂಗನಾಥಸ್ಯ ಕಿಂಕರೀಂ |
ಗಿರಿಯಮ್ಮಾಭಿಧಾಂ ವಂದೇ - ಜ್ಞಾನವೈರಾಗ್ಯ ಸಿದ್ಧಯೇ ||

ಗಿರಿಯಮ್ಮ ಮಾತ್ರೇ ನಮಃ, ವಃ ಸುಪ್ರಭಾತಮ್.

ಗಿರಿಯಮ್ಮ ತಾಯೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 35. ಶ್ರೀ ಮಹೀಪತಿದಾಸರು :

| | | |
|---|---|---|
| ಕಾಲ | : | ಕ್ರೀ||ಶ 1611 - 1681 |
| ವ್ಯವಹಾರನಾಮ | : | ಮಹೀಪತಿರಾಯರು |
| ಅಂಕಿತ | : | ಮಹೀಪತಿ |
| ಉಪದೇಶಗುರು | : | ಸಾರವಾಡದ ಭಾಸ್ಕರಸ್ವಾಮಿಗಳು |
| ಸ್ಥಳ | : | ಕಾಖಂಡಿಕಿ |
| ಪುಣ್ಯತಿಥಿ | : | ಕಾರ್ತೀಕ ಬಹುಳ ಅಮಾವಾಸ್ಯ |

ಶ್ಲೋಕ || ದಾಸಮಾರ್ಗ ಮನುಸೃತ್ಯ - ಸರ್ವಂ ತತ್ಸಾಜಯೋ ಗುರುಃ |
ಸೋಮೇ ಭೂಯಾತ್ ಸುವಿದ್ಯಾಯ - ಮಹೀಪತ್ಯಾಭಿಧೋ ಪ್ರಭುಃ ||

ಶ್ರೀ ಮಹೀಪತಿದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಮಹೀಪತಿದಾಸರೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 36. ಶ್ರೀ ಕನಕದಾಸರು :

| | | |
|---|---|---|
| ಕಾಲ | : | ಕ್ರೀ||ಶ 1508 - 1606 |
| ವ್ಯವಹಾರನಾಮ | : | ತಿಮ್ಮಪ್ಪನಾಯಕ |
| ಅಂಕಿತ | : | ನೆಲೆಯಾದಿ ಕೇಶವ |
| ಉಪದೇಶಗುರು | : | ವ್ಯಾಸರಾಜರು |
| ಸ್ಥಳ | : | ಕಾಗಿನೆಲೆ |
| ಪುಣ್ಯತಿಥಿ | : | |

ಶ್ಲೋಕ || ಯಮಾಂಶಸ್ಯ ಪರಾಭಕ್ತ್ಯಾ - ಸುಪ್ರಸನ್ನೋ ಹರಿಃ ಸ್ವಯಂ |
ಯಸ್ಯಾಚಾರ್ಯೋ ವ್ಯಾಸರಾಯಃ - ತಂ ವಂದೇ ಕನಕಾಭಿಧಂ ||

ಶ್ರೀ ಕನಕದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಕನಕದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 37. ಶ್ರೀ ಪುರಂದರದಾಸರು :

| | | |
|---|---|---|
| ಕಾಲ | : | ಕ್ರೀ||ಶ 1480 - 1564 |
| ವ್ಯವಹಾರನಾಮ | : | ಶ್ರೀನಿವಾಸನಾಯಕ |
| ಅಂಕಿತ | : | ಪುರಂದರ ವಿಠಲ |
| ಉಪದೇಶಗುರು | : | ವ್ಯಾಸರಾಯರು |
| ಸ್ಥಳ | : | ಹಂಪಿ |
| ಪುಣ್ಯತಿಥಿ | : | ಪುಷ್ಯ ಬಹುಳ ಅಮಾವಾಸ್ಯ |

ಶ್ಲೋಕ || ಮನ್ಮನೋಭೀಷ್ಟ ವರದಂ - ಸರ್ವಾಭೀಷ್ಟ ಫಲಪ್ರದಂ |
ಪುರಂದರ ಗುರುಂ ವಂದೇ - ದಾಸಶ್ರೇಷ್ಠಂ ದಯಾನಿಧಿಂ ||

ಶ್ರೀ ಪುರಂದರ ದಾಸ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಪುರಂದರದಾಸರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

# ಯತಿ ಕಕ್ಷಾ

## 1. ಶ್ರೀ ವಿದ್ಯಾಪ್ರಸನ್ನ ತೀರ್ಥರು (ವ್ಯಾಸರಾಜ ಮಠ) :

| | | |
|---|---|---|
| ಕಾಲ | : | ಕ್ರೀ||ಶ 1940 - 1969 |
| ಪೂರ್ವಾಶ್ರಮದ ಹೆಸರು | : | |
| ಅಂಕಿತ | : | ಪ್ರಸನ್ನ |
| ಉಪದೇಶಗುರು | : | ವಿದ್ಯಾವಾರಿಧಿತೀರ್ಥರು |
| ಸ್ಥಳ | : | ಸೋಸಲೆ |
| ಪುಣ್ಯತಿಥಿ | : | ಮಾರ್ಗಶಿರ ಶುದ್ಧ ಪೂರ್ಣಿಮಾ |

ಶ್ಲೋಕ || ಶ್ರೀಮತ್ ಕೃಷ್ಣ ಪದಾಂಭೋಜ - ಮಾನಸಂ ಕವಿ ಪುಂಗವಂ |
ಶ್ರೀಮತ್ ವಿದ್ಯಾಪ್ರಸನ್ನಾಬ್ಧಿಂ - ಗುರುಂ ವಂದೇ ನಿರಂತರಂ ||

ಶ್ರೀ ವಿದ್ಯಾಪ್ರಸನ್ನ ತೀರ್ಥ ಗುರುಭ್ಯೋನಮಃ. ವಃ ಸುಪ್ರಭಾತಮ್.

ಶ್ರೀ ವಿದ್ಯಾಪ್ರಸನ್ನ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಲಿಪ್ರಭಾತವಾಗಲಿ.

ಅಂಕಿತ :
ಉಪದೇಶಗುರು : ಶ್ರೀ ವಿದ್ಯಾಸಮುದ್ರತೀರ್ಥರು
ಸ್ಥಳ : ಸೋಸಲೆ

ಶ್ಲೋಕ || ದುರ್ವಾದಿ ಮತ್ತ ನಾಗೇಂದ್ರ - ವಿದಾರಣ ಮೃಗಾಧಿಪಃ |
ವಿದ್ಯಾ ರತ್ನಾಕರ ಗುರುಸ್ಸನ್ನಿಧತ್ತಾಂ ಸದಾ ಹೃದಿ ||

ಶ್ರೀ ವಿದ್ಯಾರತ್ನಾಕರ ತೀರ್ಥ ಗುರುಭ್ಯೋ ನಮಃ, ವಃ ಸುಪ್ರಭಾತಮ್.

ಶ್ರೀ ವಿದ್ಯಾರತ್ನಾಕರ ತೀರ್ಥರೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 5. ಶ್ರೀ ಸುಭೋದೇಂದ್ರತೀರ್ಥರು (ರಾಯರಮಠ) :

ಕಾಲ : ಕ್ರೀ||ಶ 1799 - 1835
ವ್ಯವಹಾರನಾಮ : ಮುದ್ದುಕೃಷ್ಣಾಚಾರ್ಯರು
ಅಂಕಿತ :
ಉಪದೇಶಗುರು : ಶ್ರೀ ಭುವನೇಂದ್ರತೀರ್ಥರು.
ಸ್ಥಳ : ನಂಜನಗೂಡು
ಪುಣ್ಯತಿಥಿ : ಚೈತ್ರ ಬಹುಳ ತೃತೀಯ

ಶ್ಲೋಕ || ಸುಧಾ ಸೇವಾ ಸಮುದ್ಭೂತ ಸುಖ ಸಂವಿತ್ಸಮಾಶ್ರಯಂ |
ಸುಜನಾಭೀಷ್ಟದಾತಾರಂ ಸುಭೋದೇಂದ್ರ ಗುರುಂ ಭಜೇ ||

ಶ್ರೀ ಸುಭೋದೇಂದ್ರ ತೀರ್ಥ ಗುರುಭ್ಯೋನಮಃ, ವಃ ಸುಪ್ರಭಾತಮ್.

ಶ್ರೀ ಸುಭೋದೇಂದ್ರತೀರ್ಥರೆ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 6. ಶ್ರೀ ಭುವನೇಂದ್ರ ತೀರ್ಥರು (ರಾಯರಮಠ) :

ಕಾಲ : ಕ್ರೀ||ಶ 1785 - 1799
ವ್ಯವಹಾರನಾಮ : ಲಕ್ಷ್ಮೀನಾರಾಯಣಾಚಾರ್ಯರು
ಅಂಕಿತ :
ಉಪದೇಶಗುರು : ಶ್ರೀ ಧೀರೇಂದ್ರತೀರ್ಥರು
ಸ್ಥಳ : ರಾಜೋಳ್ಳಿ
ಪುಣ್ಯತಿಥಿ : ವೈಶಾಖ ಬಹುಳ ಸಪ್ತಮಿ

ಶ್ಲೋಕ || ಭೂದೇವ ವಂದ್ಯ ಪಾದಾಬ್ಜಂ - ಭೂತಿಮಂತ ಮಭೀಷ್ಟದಂ |
ಭೂತಲೇ ಸಾಧು ವಿಖ್ಯಾತಂ - ಭುವನೇಂದ್ರ ಗುರುಂ ಭಜೇ ||

ಶ್ರೀ ಭುವನೇಂದ್ರತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಭುವನೇಂದ್ರತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 7. ಶ್ರೀ ವರದೇಂದ್ರತೀರ್ಥರು :

| | | |
|---|---|---|
| ಕಾಲ | : | ಕ್ರೀ||ಶ 1761 - 1785 |
| ಪೂರ್ವಾಶ್ರಮದ ಹೆಸರು | : | ಬಲರಾಮಾಚಾರ್ಯರು |
| ಅಂಕಿತ | : | ಮೂಲರಾಮ |
| ಉಪದೇಶಗುರು | : | ಶ್ರೀ ವಸುಧೇಂದ್ರ ತೀರ್ಥರು |
| ಸ್ಥಳ | : | ಪೂನಾ |
| ಪುಣ್ಯತಿಥಿ | : | ಆಷಾಢ ಶುದ್ಧ ಪಕ್ಷಿ |

ಶ್ಲೋಕ || ವಾದೇ ವಿಜಯ ಶೀಲಾಯ - ವರದಾಯ ವರಾರ್ಥಿನಾಂ |
ವದಾನ್ಯಜನ ಸಿಂಹಾಯ - ವರದೇಂದ್ರಾಯ ತೇ ನಮಃ ||

ಶ್ರೀ ವರದೇಂದ್ರತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವರದೇಂದ್ರತೀರ್ಥರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 8. ಶ್ರೀ ವಿಷ್ಣುತೀರ್ಥರು (ಅಡವಿಸ್ವಾಮಿಗಳು) :

| | | |
|---|---|---|
| ಕಾಲ | : | ಕ್ರೀ||ಶ 1756 - 1806 |
| ಪೂರ್ವಾಶ್ರಮದ ಹೆಸರು | : | ಜಯತೀರ್ಥಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯವರ ತೀರ್ಥರು |
| ಸ್ಥಳ | : | ಮಾದನೂರು |
| ಪುಣ್ಯತಿಥಿ | : | ಮಾಘ ಶುದ್ಧ ತ್ರಯೋದಶಿ |

ಶ್ಲೋಕ || ವಿಷ್ಣುತೀರ್ಥಃ ಕಲ್ಪವೃಕ್ಷೋ - ವಿಷ್ಣುತೀರ್ಥಶ್ಚ ಕಾಮಧುಕ್ |
ಚಿಂತಾಮಣಿರ್ವಿಷ್ಣು ತೀರ್ಥೋ - ಯತೀಂದ್ರಃ ಸರ್ವಕಾಮದಃ ||

ಶ್ರೀ ವಿಷ್ಣು ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವಿಷ್ಣುತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 9. ಶ್ರೀ ವಸುಧೇಂದ್ರತೀರ್ಥರು (ರಾಯರಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1750 - 1761 |
| ಪೂರ್ವಾಶ್ರಮದ ಹೆಸರು | : | ಪುರುಷೋತ್ತಮಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ವಾದೀಂದ್ರತೀರ್ಥರು |
| ಸ್ಥಳ | : | ಕೆಂಚನಗುಡ್ಡ |
| ಪುಣ್ಯತಿಥಿ | : | ಆಶ್ವೀಜ ಬಹುಳ ಸಪ್ತಮಿ |

ಶ್ಲೋಕ || ವಸುಧಾತಲ ವಿಖ್ಯಾತಂ - ವೈರಾಗ್ಯಾದಿ ಗುಣಾರ್ಣವಂ |
ವೇದವೇದಾಂಗ ಚತುರಂ - ವಸುಧೇಂದ್ರ ಗುರುಂ ಭಜೇ ||

ಶ್ರೀ ವಸುಧೇಂದ್ರ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವಸುಧೇಂದ್ರತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 10. ಶ್ರೀ ವಾದೀಂದ್ರತೀರ್ಥರು (ರಾಯರಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1728 - 1750 |
| ಪೂರ್ವಾಶ್ರಮದ ಹೆಸರು | : | ಶ್ರೀ ರಾಜಾ ಶ್ರೀನಿವಾಸಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಉಪೇಂದ್ರತೀರ್ಥರು |
| ಸ್ಥಳ | : | ಮಂತ್ರಾಲಯ |
| ಪುಣ್ಯತಿಥಿ | : | ಜೇಷ್ಟ ಶುದ್ಧ ನವಮಿ |

ಶ್ಲೋಕ || ವಂದಾರು ಜನ ಸಂದೋಹ - ಮಂದಾರ ತರು ಸನ್ನಿಭಮ್ |
ವೃಂದಾರಕ ಗುರು ಪ್ರಖ್ಯಂ - ವಂದೇ ವಾದೀಂದ್ರ ದೈಶಿಕಮ್ ||

ಶ್ರೀ ವಾದೀಂದ್ರತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವಾದೀಂದ್ರತೀರ್ಥರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 11. ಶ್ರೀ ಸತ್ಯಧರ್ಮತೀರ್ಥರು (ಉತ್ತರಾದಿಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1719 - 1752 |
| ಪೂರ್ವಾಶ್ರಮದ ಹೆಸರು | : | ಶ್ರೀ ಅಣ್ಣಯ್ಯಾಚಾರ್ಯರು |

| | | |
|---|---|---|
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯವರತೀರ್ಥರು |
| ಸ್ಥಳ | : | ಹೊಳೆಹೊನ್ನೂರು |
| ಪುಣ್ಯತಿಥಿ | : | ಶ್ರಾವಣ ಬಹುಳ ತ್ರಯೋದಶಿ |

ಶ್ಲೋಕ || ಶ್ರೀಸತ್ಯವರ ದುಗ್ಧಾಬ್ಧೇಃ ಉತ್ಥಿತಾ ಜಗತೀತಲೇ |
ಸದಾ ಶ್ರೀ ಸತ್ಯಧರ್ಮಾಖ್ಯಾ ಪಾವಯೇತ್ ಸ್ಮರತಃ ಸತಃ ||

ಶ್ರೀ ಸತ್ಯಧರ್ಮತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಸತ್ಯಧರ್ಮತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 12. ಶ್ರೀ ಸತ್ಯವರತೀರ್ಥರು (ಉತ್ತರಾದಿಮಠ) :

| | | |
|---|---|---|
| ಕಾಲ | : | ಕ್ರೀ||ಶ 1716 - 1719 |
| ಪೂರ್ವಾಶ್ರಮದ ಹೆಸರು | : | ಶ್ರೀಕೃಷ್ಣಾಚಾರ್ಯರು ಹಾವೇರಿ |
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯಸಂಧತೀರ್ಥರು |
| ಸ್ಥಳ | : | ಸಂತೇ ಬಿನ್ನೂರು |
| ಪುಣ್ಯತಿಥಿ | : | ಶ್ರಾವಣ ಶುದ್ಧ ಸಪ್ತಮಿ |

ಶ್ಲೋಕ || ಶ್ರೀ ಸತ್ಯಸಂಧತೀರ್ಥೋತ್ಥಃ ಶ್ರೀ ಸತ್ಯವರ ಚಂದ್ರಮಾಃ |
ಪ್ರಾರ್ಥಿತಾರ್ಥ ಪ್ರದೋ ನಿತ್ಯಂ - ಭೂಯಃ ಸ್ಯಾತ್ ದೃಷ್ಟಿ ಸಿದ್ಧಯೇ ||

ಶ್ರೀ ಸತ್ಯವರತೀರ್ಥ ಗುರುಭ್ಯೋ ನಮಃ, ವಃ ಸುಪ್ರಭಾತಮ್.

ಶ್ರೀ ಸತ್ಯವರ ತೀರ್ಥರೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 13. ಶ್ರೀ ಸತ್ಯಸಂಧ ತೀರ್ಥರು (ಉತ್ತರಾದಿಮಠ) :

| | | |
|---|---|---|
| ಕಾಲ | : | ಕ್ರೀ||ಶ 1705 - 1716 |
| ಪೂರ್ವಾಶ್ರಮದ ಹೆಸರು | : | ಹಾವೇರಿ ರಾಮಚಂದ್ರಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯಬೋಧ ತೀರ್ಥರು |
| ಸ್ಥಳ | : | ಮಹಿಷಿ |
| ಪುಣ್ಯತಿಥಿ | : | ಜೇಷ್ಠ ಶುದ್ಧ ದ್ವಿತೀಯ |

ಶ್ಲೋಕ || ವಿಷ್ಣೋಃ ಪದಶ್ರಿತ್ ಗೋವ್ರಾತ್ಯೈಃ ಸ್ವಾಂತ ಧ್ವಾಂತ ನಿವಾರಕಃ |
ಶ್ರೀ ಸತ್ಯ ಸಿಂಧು ಸೂರ್ಯೋಽಯಂ ಭಾಸತಾಂ ನೋ ಹೃದಂಬರೇ |

ಶ್ರೀ ಸತ್ಯಸಂಧತೀರ್ಥ ಗುರುಭ್ಯೋನಮಃ, ವಃ ಸುಪ್ರಭಾತಂ.

ಶ್ರೀ ಸತ್ಯಸಂಧತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 14. ಶ್ರೀ ವ್ಯಾಸ ತತ್ತ್ವಜ್ಞ ತೀರ್ಥರು :

| | | |
|---|---|---|
| ಕಾಲ | : | ಕ್ರೀ||ಶ 1704 - 1800 |
| ಪೂರ್ವಾಶ್ರಮದ ಹೆಸರು | : | ಶ್ರೀ ಐ.ಜಿ. ವೆಂಕಟರಾಮಾಚಾರ್ಯರು |
| ಅಂಕಿತ | : | ವಾಸುದೇವವಿಠಲ |
| ಉಪದೇಶಗುರು | : | ಶ್ರೀ ಭುವನೇಂದ್ರ ತೀರ್ಥರು |
| ಸ್ಥಳ | : | ವೇಣೀಸೋಮಪುರ |
| ಪುಣ್ಯತಿಥಿ | : | ಶ್ರಾವಣ ಬಹುಳ ಅಷ್ಟಮಿ |

ಶ್ಲೋಕ || ಪ್ರಕಟೀಕೃತ ಟೀಕೋಕ್ತಿರ್ಮರ್ಕಟೀ ಕೃತ ಮಾಯಿರಾಟ್ |
ಚಕ್ರತಾತ್ ವ್ಯಾಸ ತತ್ತ್ವಜ್ಞಃ ಮಸ್ಕರೀಂದ್ರಃ ಕೃಪಾಂ ಮಯಿ ||

ಶ್ರೀ ವ್ಯಾಸತತ್ತ್ವಜ್ಞ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವ್ಯಾಸ ತತ್ತ್ವಜ್ಞರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 15. ಶ್ರೀ ರಘುನಾಥ ತೀರ್ಥರು (ವ್ಯಾಸರಾಯರ ಮಠ) :

(ಶೇಷ ಚಂದ್ರಿಕಾಚಾರ್ಯರು)

| | | |
|---|---|---|
| ಕಾಲ | : | ಕ್ರೀ||ಶ 1700 - 1755 |
| ಪೂರ್ವಾಶ್ರಮದ ಹೆಸರು | : | |
| ಅಂಕಿತ | : | |
| ಉಪದೇಶಗುರು | : | ಶ್ರೀ ಲಕ್ಷ್ಮೀನಾರಾಯಣ ತೀರ್ಥರು |
| ಸ್ಥಳ | : | ತಿರುಮಕೂಡಲು |
| ಪುಣ್ಯತಿಥಿ | : | ಆಷಾಢ ಶುದ್ಧ ಚತುರ್ದಶಿ |

ಶ್ಲೋಕ || ಸರ್ವಂ ಸರ್ವಂ ಸಹೇಶಾನ ಸಭಾಜಿತ ವಾದಿರಾಟ್ |
ಸರ್ವದಾ ಸರ್ವದೋ ಭೂಯಾತ್ ರಘುನಾಥ ಮುನೀಶ್ವರಃ ||

ಶ್ರೀ ರಘುನಾಥ ತೀರ್ಥ ಗುರುಭ್ಯೋ ನಮಃ, ವಃ ಸುಪ್ರಭಾತಮ್.

ಶ್ರೀ ರಘುನಾಥ ತೀರ್ಥರೇ, ನಿಮಗೆ ಅನಂತ ನಮನಗಳು, ನಿಮಗೆ ಸುಪ್ರಭಾತವಾಗಲಿ.

## 16. ಶ್ರೀ ಸತ್ಯಬೋಧ ತೀರ್ಥರು (ಉತ್ತರಾದಿ ಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1666 - 1705 |
| ಪೂರ್ವಾಶ್ರಮದ ಹೆಸರು | : | ಶ್ರೀ ಪಾಂಡುರಂಗೀ ರಾಮಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯಪ್ರಿಯತೀರ್ಥರು |
| ಸ್ಥಳ | : | ಸವಣೂರು |
| ಪುಣ್ಯತಿಥಿ | : | ಫಾಲ್ಗುಣ ಬಹುಳ ಪಾಡ್ಯ |

ಶ್ಲೋಕ || ನೈವೇದ್ಯಗವಿಷಂ ರಾಮೇ ವೀಕ್ಷ್ಯತದ್ಭುಕ್ತಿ ಭಾಕ್ ಗುರುಃ |
ಯೋದರ್ಶಯದ್ರವಿಂ ರಾತ್ರೌ ಸತ್ಯಬೋಧೋಸ್ತು ಮೇಮುದೇ ||

ಶ್ರೀ ಸತ್ಯಬೋಧ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಸತ್ಯಬೋಧತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 17. ಶ್ರೀ ಸತ್ಯಪ್ರಿಯ ತೀರ್ಥರು (ಉತ್ತರಾದಿಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1659 - 1666 |
| ಪೂರ್ವಾಶ್ರಮದ ಹೆಸರು | : | ಗಾರ್ಲವಾಡದ ರಾಮಾಚಾರ್ಯರು |
| ಅಂಕಿತ | : | |
| ಉಪದೇಶಗುರು | : | ಶ್ರೀ ಸತ್ಯವಿಜಯತೀರ್ಥರು |
| ಸ್ಥಳ | : | ಮಾನಾ ಮಧುರೆ |
| ಪುಣ್ಯತಿಥಿ | : | ಚೈತ್ರ ಶುದ್ಧ ತ್ರಯೋದಶಿ |

ಶ್ಲೋಕ || ಶ್ರೀ ಸತ್ಯವಿಜಯಾಂ ಭೋಧೇಃ ಜಾತಂ ಸತ್ಯಪ್ರಿಯಾಮೃತಂ |
ಜರಾಮೃತಿ ಜಂಘನೀತು ವಿಬುಧಾನಾಂ ಮುದೆ ಸದಾ ||

ಶ್ರೀ ಸತ್ಯಪ್ರಿಯತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಸತ್ಯಪ್ರಿಯ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 18. ಶ್ರೀ ಸತ್ಯಪೂರ್ಣತೀರ್ಥರು (ಉತ್ತರಾದಿ ಮಠ) :

| | | |
|---|---|---|
| ಕಾಲ | : | ಕ್ರೀ\|\|ಶ 1628 - 1648 |
| ಪೂರ್ವಾಶ್ರಮದ ಹೆಸರು | : | ಕೃಷ್ಣಾಚಾರ್ಯ |
| ಅಂಕಿತ | : | |

ಉಪದೇಶಗುರು : ಶ್ರೀ ಸತ್ಯಾಭಿನವ ತೀರ್ಥರು
ಸ್ಥಳ : ಕೋಲಪುರ
ಪುಣ್ಯತಿಥಿ : ಜೇಷ್ಟ ಬಹುಳ ದ್ವಿತೀಯ

ಶ್ಲೋಕ || ಸತ್ಯಾಭಿನವ ದುಗ್ಧಾಬ್ಧೇಃ ಸಂಜಾತಃ ಸಕಲೇಷ್ಟದಃ |
ಶ್ರೀ ಸತ್ಯಪೂರ್ಣತೀರ್ಥೇಂದುಃ ಸಂತಾಪಾನ್ ಹಂತು ಸಂತತಂ ||

ಶ್ರೀ ಸತ್ಯಪೂರ್ಣ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಸತ್ಯಪೂರ್ಣತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 19. ಶ್ರೀ ರಾಘವೇಂದ್ರತೀರ್ಥರು :

ಕಾಲ : ಕ್ರೀ||ಶ 1623 - 1671
ಪೂರ್ವಾಶ್ರಮದ ಹೆಸರು : ವೀಣಾವೆಂಕಣ್ಣಭಟ್ಟರು.
ಅಂಕಿತ : ಧೀರವೇಣುಗೋಪಾಲ
ಉಪದೇಶಗುರು : ಶ್ರೀ ಸುಧೀಂದ್ರತೀರ್ಥರು
ಸ್ಥಳ : ಮಂತ್ರಾಲಯ
ಪುಣ್ಯತಿಥಿ : ಶ್ರಾವಣ ಬಹುಳ ದ್ವಿತೀಯ

ಶ್ಲೋಕ || ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ |
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ||

ಶ್ರೀ ರಾಘವೇಂದ್ರ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ರಾಘವೇಂದ್ರ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## ಉದಯರಾಗ

ರಾಗ - ಭೂಪಾಳಿ ತಾಳ - ಝಂಪೆ

ಏಳಯ್ಯ ಗುರುವೆ ಬೆಳಗಾಯಿತು
ಏಳಯ್ಯ ಗುರುರಾಯ ಏಳಯ್ಯ ಶುಭಕಾಯ || ಪ ||

ಏಳು ಮಹರಾಯ ಏಳು ಎನಜೀಯಾ
ಶೀಲ ನಿನ್ನ ಭಕ್ತರು - ಸಾಲು ಸಾಲಾಗಿ ನಿಂತಿಹರೋ || ಅ.ಪ. ||

ಉದಯಾದ್ರಿ ಶೃಂಗದಲಿ - ಉದಿಸಿದನು ಭಾಸ್ಕರನು
ಸದಮಲ ಬುಧರೆಲ್ಲ ಮುದದಿಂದಲೀ ಎದ್ದು

ನದಿಯ ಸ್ನಾನವ ಮಾಡಿ ಉದಕ ಪುಷ್ಪಗಳಿಂದ
ಸದನಕ್ಕೆ ತಾವು ಬಂದು ಪದುಮ ನಾಭನ ಭಜಿಸಿ
ಪಾದೋದಕವನೆ ಧರಿಸಿ ಸದಯ ನಿನ್ನ ಪಾದ ಸಂದರುಶನಕೆ ಬಂದಿಹರೋ ||೧||

ನಿತ್ಯ ಭಜಿಸುವ ಜನರೆಲ್ಲ - ಹೊತ್ತು ಮೀರಿತು ಎಂದು
ಚಿತ್ತ ಶುದ್ಧಿಯಲಿಂದ ಉತ್ತಮಾರ್ಹಣೆಗಳಾ ತಮ್ಮ
ನೆತ್ತಿಯಿಂದಾಪೊತ್ತು - ಜತ್ತಾಯತಾಗಿ ನಿಂತಿಹರೋ
ಉತ್ತಮಾ ನಿನ ನಿದ್ರೆ - ಹೊತ್ತು ಮೀರ್ಯಾಯಿತೋ
ತೊತ್ತಿಗಾರೆಲ್ಲರು ಪಾದವತ್ತಿ ದೋಧಿಸುತಿಹರೋ
ಚಿತ್ತಕ್ಕೆ ತಂದು ತ್ವರಿತದಿ ಏಳು ||೨||

ವಿಮತಾದ್ರಿ ಕುಲಿಶನೇ ವಿಮಲಗಾತ್ರನೆ ಏಳು
ನಮಿಪ ಜನರಾರ್ಥದಾತ ದಿವಿಜದ್ರುಮನೆ - ಪ್ರೇಮವಾರಿಧಿ ಏಳೋ
ತಾಮರಸಾಂಬಕನೆ ಏಳೋ ಆಮಯಧ್ವಂಸಕ ನೀನೇಳೋ
ಗೋಮತೀ ಕುಮುದ - ಸೋಮ ಸಾಂದ್ರನೆ ಏಳೋ ಶ್ರೀ
ರಾಮಪಾದ ಭೃಂಗನೆ ಏಳೋ ಯಾಮ ಮೀರಿತು ವಿಶ್ವನಿಯಾಮಕ ದೂತನೇ
ಸಾಮಗಾಯನಲೋಲ ರಮಾವಲ್ಲಭನಪ್ರೀಯ ಗುರುರಾಜ ವರ್ಯ ||೩||

ಮೌನಿಕುಲರನ್ನ ಮಾನನಿಧಿಯೇ - ಎನ್ನ ಬಿನ್ನಪವ ಕೇಳಯ್ಯ ಜೀಯ್ಯಾ
ನಿನ್ನ ದೋಧಿಪಕನ್ಯ ಜನರುಂಟೆ ನಿನ್ನಿಂದ ನೀ ಚನ್ನಾಗಿ ಏಳು
ಮುನ್ನೆ ಮಹಾಕಾರ್ಯಂಗಳು ಘನ್ನವಾಗಿರುತಿಹವೋ ನಿನ್ನೊರತು ಇನ್ನಾರು
ಮಾಳ್ಪರೋ - ಎನ್ನ ನುಡಿ ಈಗ - ಚನ್ನಾಗಿ ಮನದಿ ತಂದು - ಮನ್ನಿಸೀ ಪೊರೆಯೊ
ಧೊರೆಯೇ ||೪||

ದಾತ ಈ ಜನಜಾತಿ ಸಾಕಲಾರದೆ ಸೋತು ಮಲಗಿದೆಯಾ
ಪಾತಕಾಂಭುಧಿ ಪೋತನೆ ಮಾತರಿಶ್ವನ ತಾತ
ಸೀತಾನಾಥನ ಪಾದಪಾಥ ಭವಯುಗ್ಮದಲಿ ಸಂ-
ಜಾತವಾಗಿಹ ಸುಧಾ ಪೀತಕಾರಣ ಮದಾ ಸಂ-
ಭೂತದಿಂದ ಮಲಗಿದೆಯಾ ಭೂತನಾಥನ ಗುರು ಜಗ-
ನ್ನಾಥವಿಠಲನ ದೂತನಾನೆಂಬ ಗರುವಿಂದ ಮಲಗಿದೆಯಾ ||೫||

## 20. ಶ್ರೀ ಸುಧೀಂದ್ರತೀರ್ಥರು :

| | | |
|---|---|---|
| ಕಾಲ | : | ಕ್ರಿ||ಶ 1614 - 1623 |
| ಪೂರ್ವಾಶ್ರಮದ ಹೆಸರು | : | ನಾರಾಯಣಾಚಾರ್ಯ |
| ಅಂಕಿತ | : | |

ಉಪದೇಶಗುರು : ಶ್ರೀ ವಿಜಯೀಂದ್ರತೀರ್ಥರು
ಸ್ಥಳ : ನವವೃಂದಾವನ
ಪುಣ್ಯತಿಥಿ : ಫಾಲ್ಗುಣ ಬಹುಳ ದ್ವಿತೀಯ

ಶ್ಲೋಕ || ಕುಶಾಗ್ರಮತಯೇ ಭಾನು ದ್ಯುತಯೇ ವಾದಿ ಭೀತಯೇ
ಆರಾತಧಿಃ ಶ್ರೀಪತಯೇ ಸುಧೀಂದ್ರ ಯತಯೇ ನಮಃ

ಶ್ರೀ ಸುಧೀಂದ್ರತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಸುಧೀಂದ್ರತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ಗಲಿ.

## 21. ಶ್ರೀ ವಿಜಯೀಂದ್ರತೀರ್ಥರು :

ಕಾಲ : ಕ್ರೀ||ಶ 1575 - 1616
ಪೂರ್ವಾಶ್ರಮದ ಹೆಸರು : ವಿಠಲಾಚಾರ್ಯರು
ಅಂಕಿತ : ವಿಜಯೀಂದ್ರರಾಮ
ಉಪದೇಶಗುರು : ಶ್ರೀ ಸುರೇಂದ್ರ ತೀರ್ಥರು
ಸ್ಥಳ : ಕುಂಭಕೋಣ
ಪುಣ್ಯತಿಥಿ : ಜೇಷ್ಟ ಶುದ್ಧ ತ್ರಯೋದಶಿ

ಶ್ಲೋಕ || ಭಕ್ತಾನಾಂ ಮಾನಸಾಂಭೋಜ ಭಾನವೇ ಕಾಮಧೇನವೇ
ನಮತಾಂ ಕಲ್ಪತರವೇ ಜಯೀಂದ್ರ ಗುರವೇ ನಮಃ

ಶ್ರೀ ವಿಜಯೀಂದ್ರ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವಿಜಯೀಂದ್ರತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭ ವಾಗಲಿ.

## 22. ಶ್ರೀ ಜಿತಾಮಿತ್ರತೀರ್ಥರು :

ಕಾಲ : ಕ್ರೀ||ಶ 1490 - 1492
ಪೂರ್ವಾಶ್ರಮದ ಹೆಸರು : ಅನಂತಪ್ಪ
ಅಂಕಿತ :
ಉಪದೇಶಗುರು : ಶ್ರೀ ವಿಭುಧೇಂದ್ರತೀರ್ಥರು
ಸ್ಥಳ : ಶಿವಪುರ
ಪುಣ್ಯತಿಥಿ : ಮಾರ್ಗಶಿರ ಬಹುಳ ಅಮಾವಾಶ್ಯ

ಶ್ಲೋಕ || ಸಪ್ತರಾತ್ರಂ ಕೃಷ್ಣವೇಣ್ಯಾ ಮುಷಿತ್ವಾ ಪುನರುತ್ಥಿತಮ್
ಜಿತಾಮಿತ್ರ ಗುರುಂ ವಂದೇ ವಿಭುಧೇಂದ್ರ ಕರೋದ್ಭವಮ್

ಶ್ರೀ ಜಿತಾಮಿತ್ರ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಜಿತಾಮಿತ್ರ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 23. ಶ್ರೀ ವಾದಿರಾಜರು :

| | | |
|---|---|---|
| ಕಾಲ | : | ಕ್ರೀ||ಶ 1480 - 1600 |
| ಪೂರ್ವಾಶ್ರಮದ ಹೆಸರು | : | ಭೂವರಾಹ |
| ಅಂಕಿತ | : | ಹಯವದನ |
| ಉಪದೇಶಗುರು | : | ವಾಗೀಶತೀರ್ಥರು |
| ಸ್ಥಳ | : | ಸ್ವಾದಿ |
| ಪುಣ್ಯತಿಥಿ | : | ಫಾಲ್ಗುಣ ಬಹುಳ ತೃತೀಯ |

ಶ್ಲೋಕ || ತಪೋ ವಿದ್ಯಾ ವಿರಕ್ತ್ಯಾದಿ ಸದ್ಗುಣೌಘಾಕರಾನಹಂ
ವಾದಿರಾಜ ಗುರೂನ್ ವಂದೇ ಹಯಗ್ರೀವ ದಯಾಶ್ರಯಾನ್

ಶ್ರೀ ವಾದಿರಾಜ ತೀರ್ಥ ಗುರುಭ್ಯೋ ನಮಃ, ವಃ ಸುಪ್ರಭಾತಮ್.

ಶ್ರೀ ವಾದಿರಾಜ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 24. ಶ್ರೀ ರಘೂತ್ತಮ ತೀರ್ಥರು (ಉತ್ತರಾದಿಮಠ) :

| | | |
|---|---|---|
| ಕಾಲ | : | ಕ್ರೀ||ಶ 1479 - 1517 |
| ಪೂರ್ವಾಶ್ರಮದ ಹೆಸರು | : | ರಾಮಚಂದ್ರಾಚಾರ್ಯ |
| ಅಂಕಿತ | : | |
| ಉಪದೇಶಗುರು | : | ಶ್ರೀ ರಘುವರ್ಯತೀರ್ಥರು |
| ಸ್ಥಳ | : | ತಿರುಕೋಯಿಲೂರು |
| ಪುಣ್ಯತಿಥಿ | : | ಪುಷ್ಯ ಶುದ್ಧ ಏಕಾದಶಿ |



ಶ್ಲೋಕ || ಭಾವಭೋಧ ಕೃತಂ ಸೇವೆ ರಘೂತ್ತಮ ಮಹಾಗುರುಂ
ಯತ್ ಶಿಷ್ಯ ಶಿಷ್ಯ ಶಿಷ್ಯಾದ್ಯಾಃ ಟಿಪ್ಪಣ್ಯಾಚಾರ್ಯ ಸಂಜ್ಞಿತಾಃ

ಶ್ರೀ ರಘೂತ್ತಮ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ರಘೂತ್ತಮ ತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 25. ಶ್ರೀ ವ್ಯಾಸರಾಜರು :

| | | |
|---|---|---|
| ಕಾಲ | : | ಕ್ರೀ\|\|ಶ 1447 - 1539 |
| ಪೂರ್ವಾಶ್ರಮದ ಹೆಸರು | : | ಯತಿರಾಜ |
| ಅಂಕಿತ | : | ಕೃಷ್ಣ |
| ಉಪದೇಶಗುರು | : | ಶ್ರೀ ಬ್ರಹ್ಮಣ್ಯತೀರ್ಥರು |
| ಸ್ಥಳ | : | ನವವೃಂದಾವನ |
| ಪುಣ್ಯತಿಥಿ | : | ಫಾಲ್ಗುಣ ಬಹುಳ ಚತುರ್ಥಿ |

ಶ್ಲೋಕ || ಅರ್ಥಿಕಲ್ಪಿತ ಕಲ್ಪೋಽಯಂ ಪ್ರತ್ಯರ್ಥಿ ಗಜಕೇಶರಿ
ವ್ಯಾಸತೀರ್ಥ ಗುರುರ್ಭೂಯಾತ್ ಅಸ್ಮದಿಷ್ಟಾರ್ಥಸಿದ್ಧಯೇ

ಶ್ರೀ ವ್ಯಾಸತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ವ್ಯಾಸತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 26. ಶ್ರೀ ಶ್ರೀಪಾದರಾಜರು :

| | | |
|---|---|---|
| ಕಾಲ | : | ಕ್ರೀ\|\|ಶ 1404 - 1502 |
| ಪೂರ್ವಾಶ್ರಮದ ಹೆಸರು | : | ಲಕ್ಷ್ಮೀನಾರಾಯಣ |
| ಅಂಕಿತ | : | ರಂಗವಿಠಲ |
| ಉಪದೇಶಗುರು | : | ಶ್ರೀ ಸ್ವರ್ಣವರ್ಣತೀರ್ಥರು |
| ಸ್ಥಳ | : | ಮುಳಬಾಗಿಲು |
| ಪುಣ್ಯತಿಥಿ | : | ಜ್ಯೇಷ್ಠ ಶುದ್ಧ ತ್ರಯೋದಶಿ |

ಶ್ಲೋಕ || ಶ್ರೀ ಪೂರ್ಣ ಬೋಧ ಗುರುಪೂಜಿತ ಗೋಪಿನಾಥ
ಬಾಹ್ಯಾಂತರಾನ ವರತಾರ್ಚನ ತತ್ಪರಾಯ
ಶ್ರೀ ರಂಗವಿಠಲಹಯಾನನ ಪೂಜಕಾಯ
ಶ್ರೀಪಾದರಾಜ ಗುರವೇಸ್ತು ನಮಃ ಶುಭಾಯ.

ಶ್ರೀಪಾದರಾಜ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಪಾದರಾಜರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಿಲಿ.

## 27. ಶ್ರೀ ಜಯತೀರ್ಥರು :

| | | |
|---|---|---|
| ಕಾಲ | : | ಕ್ರೀ\|\|ಶ 1363 - 1388 |
| ಪೂರ್ವಾಶ್ರಮದ ಹೆಸರು | : | ಧೋಂಡೋಪಂತ್ |
| ಅಂಕಿತ | : | |
| ಉಪದೇಶಗುರು | : | ಶ್ರೀ ಅಕ್ಷೋಭ್ಯತೀರ್ಥರು |
| ಸ್ಥಳ | : | ಮಳಖೇಡ |
| ಪುಣ್ಯತಿಥಿ | : | ಮಾರ್ಗಶಿರ ಬಹುಳ ಪಂಚಮಿ |

ಶ್ರೀಮನ್ನ್ಯಾಯ ಸುಧಾ ಏನ ನಿರ್ಮಿತಾ ಧೀಮತಾಂ ಮತಾ
ತಂ ಜ್ಞಾನಾದಿ ಗುಣೋಪೇತಂ ಜಯತೀರ್ಥ ಗುರುಂಭಜೇ

ಶ್ರೀ ಜಯತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಜಯತೀರ್ಥ ಗುರುಗಳೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 28. ಅಕ್ಷೋಭ್ಯತೀರ್ಥರು :

| | | |
|---|---|---|
| ಕಾಲ | : | ಕ್ರೀ\|\|ಶ 1350 - 1366 |
| ಉಪದೇಶ ಗುರು | : | ಶ್ರೀ ಮದಾಚಾರ್ಯರು |
| ಸ್ಥಳ | : | ಮಳಖೇಡ |
| ಪುಣ್ಯತಿಥಿ | : | ಮಾರ್ಗಶಿರ ಬಹುಳ ಪಂಚಮಿ |

ಶ್ಲೋಕ || ಯೋ ವಿದ್ಯಾರಣ್ಯ ವಿಪಿನಂ ತತ್ವಮಸ್ಯಾ ಸಿನಾಚ್ಛಿನತ್
ಶ್ರೀಮದಕ್ಷೋಭ್ಯ ತೀರ್ಥಾಯ ನಮಸ್ತಸ್ಮೈ ಮಹಾತ್ಮನೇ ||

ಶ್ರೀ ಅಕ್ಷೋಭ್ಯತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಅಕ್ಷೋಭ್ಯತೀರ್ಥರೇ ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 29. ಶ್ರೀ ಮಾಧವತೀರ್ಥರು :

| | | |
|---|---|---|
| ಕಾಲ | : | ಕ್ರೀ\|\|ಶ 1333 - 1350 |
| ಪೂರ್ವಾಶ್ರಮದ ಹೆಸರು | : | ವಿಷ್ಣುಶಾಸ್ತ್ರಿ |
| ಅಂಕಿತ | : | |
| ಉಪದೇಶಗುರು | : | ಶ್ರೀಮದಾಚಾರ್ಯರು |

ಸ್ಥಳ : ಮಣೂರು
ಪುಣ್ಯತಿಥಿ : ಭಾದ್ರಪದ ಬಹುಳ ಅಮಾವಾಸ್ಯ

ಶ್ಲೋಕ || ಸಾಧಿತಾಖಿಲ ಸತ್ತತ್ವಂ ಭಾದಿತಾ ಖಿಲ ದುರ್ಮತಂ
ಬೋಧಿತಾಖಿಲ ಸನ್ಮಾರ್ಗಂ ಮಾಧವಾಖ್ಯಯತಿಂ ಭಜೇ ||

ಶ್ರೀ ಮಾಧವತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಮಾಧವತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 30. ಶ್ರೀ ನರಹರಿತೀರ್ಥರು :

ಕಾಲ : ಕ್ರೀ||ಶ 1324 - 1333
ಪೂರ್ವಾಶ್ರಮದ ಹೆಸರು : ಶ್ರೀರಾಮಶಾಸ್ತ್ರಿಗಳು
ಅಂಕಿತ : ನರಹರಿ
ಉಪದೇಶಗುರು : ಶ್ರೀಮದಾನಂದತೀರ್ಥರು
ಸ್ಥಳ : ಹಂಪಿ
ಪುಣ್ಯತಿಥಿ : ಪುಷ್ಯಬಹುಳ ಸಪ್ತಮಿ

ಶ್ಲೋಕ || ಸ ಸೀತಾಮೂಲರಾಮಾರ್ಚಾ ಕೋಶೇ ಗಜಪತೇ ಸ್ಥಿತಾ
ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿ ಭಿಕ್ಷವೇ||

ಶ್ರೀ ನರಹರಿ ತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ನರಹರಿತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 31. ಶ್ರೀ ಪದ್ಮನಾಭತೀರ್ಥರು :

ಕಾಲ : ಕ್ರೀ||ಶ 1317 - 1324
ಪೂರ್ವಾಶ್ರಮದ ಹೆಸರು : ಶ್ರೀ ಶೋಭನಭಟ್ಟರು
ಅಂಕಿತ :
ಉಪದೇಶಗುರು : ಶ್ರೀಮದಾನಂದತೀರ್ಥರು
ಸ್ಥಳ : ನವವೃಂದಾವನ
ಪುಣ್ಯತಿಥಿ : ಕಾರ್ತೀಕ ಬಹುಳ ಚತುರ್ದಶಿ

ಶ್ಲೋಕ || ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್ಭಾವ ಪೂರ್ವಕಮ್
ಯೋವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯ ಯೋಗಿನೇ ||

ಶ್ರೀ ಪದ್ಮನಾಭತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀ ಪದ್ಮನಾಭತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 32. ಶ್ರೀಮದಾನಂದತೀರ್ಥರು :

| | | |
|---|---|---|
| ಕಾಲ | : | ಕ್ರಿ|| ಶ|| 1238 - 1317 |
| ಪೂರ್ವಾಶ್ರಮದ ಹೆಸರು | : | ವಾಸುದೇವ |
| ಅಂಕಿತ | : | ಆನಂದತೀರ್ಥ |
| ಉಪದೇಶಗುರು | : | ಅಚ್ಯುತ ಪ್ರೇಕ್ಷಾಚಾರ್ಯರು |
| ಸ್ಥಳ | : | ಬದರಿಕಾಶ್ರಮ |
| ಪುಣ್ಯತಿಥಿ | : | ಮಾಘ ಶುದ್ಧ ನವಮಿ |

ಶ್ಲೋಕ || ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ |
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಂ ||

ಶ್ರೀಮದಾನಂದತೀರ್ಥ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಶ್ರೀಮದಾನಂದತೀರ್ಥರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

# ದೇವತಾ ಕಕ್ಷೆ

## 32 ನೇ ಕಕ್ಷಾ - ಮಾನುಷೋತ್ತಮರು

ಶ್ರೀ ಮುಕುಂದನ ಮೂರ್ತಿಗಳ ಸೌ - ದಾಮಿನಿಯ ಪೋಲ್ ಹೃದಯವಾರಿಜ

ವ್ಯೋಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ

ಆಮನುಷ್ಯೋತ್ತಮರ ಪದಯುಗ ತಾಮರಸಗಳಿಗೆರಗುವೆ ಸದಾ

ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತ ಜನ ತತಿಯ || (ಹ||ಸಾ 32-52)

ಮಾನುಷೋತ್ತಮ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಮಾನುಷೋತ್ತಮ ಗುರುಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 31 ನೇ ಕಕ್ಷಾ - ಮನುಷ್ಯರಾಜರುಗಳು

ಮಾನವರಾಜ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಮನುಷ್ಯರಾಜರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತ ವಾಗಲಿ.

## 30 ನೇ ಕಕ್ಷಾ - ಮನುಷ್ಯ ಗಂಧರ್ವರು

ಭುವನ ಪಾವನ ವೆನಿಪ ಲಕ್ಷ್ಮೀ | ಧವನ ಮಂಗಳ ದಿವ್ಯನಾಮ
ಸ್ತವನಗೈವ ಮನುಷ್ಯಗಂಧರ್ವರಿಗೆ ವಂದಿಸುವೆ
ಪ್ರವರ ಭೂಭುಜರುಳಿದು ಮಧ್ಯಮ ಕುವಲಯಪರೆಂದೆನಿಸಿಕೊಂಬರ
ದಿವಸ ದಿವಸಂಗಳಲಿ ನೆನೆವೆನು ಕರಣ ಶುದ್ಧಿಯಲಿ || (ಹ||ಸಾ 32-51)

ಮಾನುಷ್ಯ ಗಂಧರ್ವ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ಮಾನುಷ್ಯ ಗಂಧರ್ವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 29 ನೇ ಕಕ್ಷಾ - ದೇವಗಂಧರ್ವರು

ಪಾವನಕೆ ಪಾವನ ನೆನಿಸುವ ರಮಾವಿನೋದನ ಗುಣಗಣಂಗಳ
ಸಾವಧಾನದಲೇಕ ಮಾನಸರಾಗಿ ಸುಸ್ವರದಿ
ಆವಿಬುಧಪತಿ ಸಭೆಯೊಳಗೆ ನಾನಾವಿಲಾಸದಿ ಪಾಡಿ ಸುಖಿಸುವ
ದೇವ ಗಂಧರ್ವರು ಕೊಡಲಿ ಎಮಗಖಿಳ ಪುರುಷಾರ್ಥ || (ಹ||ಸಾ 32-50)

ದೇವ ಗಂಧರ್ವ ಗುರುಭ್ಯೋ ನಮಃ. ವಃ ಸುಪ್ರಭಾತಮ್.

ದೇವ ಗಂಧರ್ವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 28 ನೇ ಕಕ್ಷಾ - ಚಿರಪಿತೃಗಳು

ಚಿರಪಿತೃಭ್ಯೋ ನಮಃ. ವಃ ಸುಪ್ರಭಾತಮ್.

ಚಿರಪಿತೃಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 27 ನೇ ಕಕ್ಷಾ - ಅಜಾನಜಾದಿದೇವತೆಗಳು

ಅಜಾನಜದೇವ - ಸಿದ್ಧ - ಸಾಧ್ಯ - ಗುಹ್ಯ - ಕಿನ್ನರ - ಕಿಂಪುರುಷ - ಚಾರಣ - ಯಕ್ಷ - ರಾಕ್ಷಸ - ವಿದ್ಯಾಧರ - ಅಸುರ - 16100 ಕೃಷ್ಣಪತ್ನೀ - ಅಪ್ಸರಾಸ್ತ್ರೀ - ಶತೋನು ಶತಕೋಟಿ ಋಷಿಭ್ಯೋ ನಮಃ - ವಃ ಸುಪ್ರಭಾತಮ್.

ಅಜಾನಜದೇವತೆಗಳೆ, ಸಿದ್ಧರೇ, ಸಾಧ್ಯರೇ, ಗುಹ್ಯಕರೇ, ಕಿನ್ನರರೇ, ಕಿಂಪುರುಷರೇ, ಚಾರಣರೇ, ಯಕ್ಷರೇ, ರಾಕ್ಷಸರೇ, ವಿದ್ಯಾಧರರೇ, ಅಸುರರೇ, 16100 ಕೃಷ್ಣಪತ್ನಿಯರೇ, ಅಪ್ಸರಾಸ್ತ್ರೀಯರೇ, ಶತೋನು ಶತಕೋಟಿ ಋಷಿಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 26 ನೇ ಕಕ್ಷಾ - ಪುಷ್ಕರ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿ ಬಂದ ಇವರ ಶರೀರ "ರಜೋರಜತಮೋ" ಗುಣಾತ್ಮಕವಾದುದು. ತಾರತಮ್ಯದಲ್ಲಿ ಶನೈಶ್ಚರರಿಂದ ಕಿಂಚಿದವರ ರೆನಿಸಿ 25 ನೇ ಕಕ್ಷದಲ್ಲಿರುವರು. ಸಾಧನೆ 6 ಬ್ರಹ್ಮಕಲ್ಪಗಳು. ಇವರು ಕರ್ಮಕ್ಕೆ ಅಭಿಮನಿಯಾಗಿರುವರು.

ಇವರ ದೇಹವು 11 ಲಕ್ಷಣಗಳಿಂದ ಕೂಡಿದೆ.

ನಿರತಿಶಯ ಸುಜ್ಞಾನ ಪೂರ್ವಕ| ವಿರಚಿಸುವ ನಿಷ್ಕಾಮ ಕರ್ಮಗ

ಳರಿತು ತತ್ತತ್ಕಾಲದಲಿ ತಜ್ಜನ್ಯಫಲರಸವ

ಹರಿಯ ನೇಮದಲುಣಿಸಿ ಬಹು ಜೀ - ವರಿಗೆ ಕರ್ಮಪ ನೆನಿಪ ಗುರುಪು

ಷ್ಕರನು ಸತ್ಕರ್ಮಂಗಳಲಿ ನಿರ್ವಿಘ್ನತೆಯ ಕೂಡಲಿ (ಹ||ಸಾ 32-45)

ಕರ್ಮಾಭಿಮಾನಿ ಪುಷ್ಕರಾಯ ನಮಃ. ತವಸುಪ್ರಭಾತಮ್.

ಕರ್ಮಾಭಿಮಾನಿಯಾದ ಓ ಪುಷ್ಕರರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 25 ನೇ ಕಕ್ಷ - ಧರಣೀದೇವಿ ಶನೈಶ್ಚರ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿ ಬಂದ ಇವರ ಶರೀರ "ರಜೋ, ರಜ, ತಮೋ" ಗುಣಾತ್ಮಕವಾದುದು. ತಾರತಮ್ಯದಲ್ಲಿ ಉಷಾದೇವಿಗಿಂದಲು 2 ಗುಣಗಳಿಂದ ಕಡಿಮೆ ಎನಿಸಿ, 25 ನೇ ಕಕ್ಷದಲ್ಲಿರುವರು.

ಸಾಧನೆ 6 ಬ್ರಹ್ಮಕಲ್ಪಗಳು. ಪೃಥ್ವೀತತ್ತ್ವಕ್ಕೆ ಅಭಿಮಾನಿಗಳಾಗಿ ಆ ತತ್ತ್ವಕ್ಕೆ ನಿಯಾಮಕನಾದ ಶ್ರೀಕೃಷ್ಣನನ್ನು ಉಪಾಸಿಸುವರು. ಇವರ ದೇಹವು 12 ಲಕ್ಷಣಾತ್ಮಕವಾದುದು. ಧರಣೀ ದೇವಿ ಕಶ್ಯಪಬ್ರಹ್ಮನ ಪುತ್ರಿ; ವರದದೇವರ ಪತ್ನಿ. ಶನೈಶ್ಚರನು ಸೂರ್ಯನ ಪುತ್ರನು.

ವನಧಿವಸನೆ ವರಾದ್ರಿ ನಿಚಯ| ಸ್ತನ ವಿರಾಜಿತೆ ಚೇತನಾಚೇ-
ತನ ವಿಧಾರಕೆ ಗಂಧ ರಸ ರೂಪಾದಿ ಗುಣ ವಪುಷೆ
ಮುನಿ ಕುಲೋತ್ತುಮ ಕಶ್ಯಪನ ನಿಜ| ತನುಜೆ ನಿನಗಾ ನಮಿಪೆ ಎನ್ನವ-
ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಗಿ (ಹ.ಸಾ. 32-43)

ಹರಿ ಗುರುಗಳರ್ಚಿಸದ ಪಾಪಾ| ತ್ಮರನ ಶಿಕ್ಷಿಸ ಲೋಸುಗ ಶನೈ
ಶ್ಚರ ನೆನಿಸಿ ದುಷ್ಫಲಗಳೀವೆ ನಿರಂತರವು ಬಿಡದೆ|
ತರಣಿನಂದನ ನಿನ್ನ ಪಾದಾಂ| ಬುರುಹಗಳಿಗಾ ನಮಿಪೆ ಬಹು ದು-
ಸ್ತರ ಭವಾರ್ಣವ ಮಗ್ನನಾದೆನ್ನುದ್ಧರಿಸ ಬೇಕು || (ಹ.ಸಾ. 32-44)

ಧರಾಶನೈಶ್ಚರಾಭ್ಯಾನಮಃ. ಯುವಯೋಃ ಸುಪ್ರಭಾತಮ್.

ಧರಣೀ - ಶನೇಶ್ಚರರೇ, ನಿಮಗೆ ಅನಂತ ಪ್ರಣಾಮಗಳು. ನಿಮಗೆ ಸುಪ್ರಭಾತ ವಾಗಲಿ.

## 24 ನೇ ಕಕ್ಷ ಉಷಾದೇವಿ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿ ಬಂದ ಇವರ ಶರೀರವು "ರಜೋರಜ ತಮೋ" ಗುಣಾತ್ಮಕವಾದುದು. ತಾರತಮ್ಯದಲ್ಲಿ ಸ್ವಾಹಾದೇವಿಗಿಂತಲು 10 ಗುಣಗಳಿಂದ ಕಡಿಮೆ ಎನಿಸಿ, 24 ನೇ ಕಕ್ಷದಲ್ಲಿರುವರು. ಸಾಧನೆ 6 ಬ್ರಹ್ಮಕಲ್ಪಗಳು. ಭಗವಂತನ ನಾಮಗಳಿಗೆ ಅಭಿಮಾನಿ ಎನಿಸುವರು. ಇವರು ಅಶ್ವಿನೀದೇವತೆಗಳ ಹೆಂಡತಿ. ಇವರ ದೇಹವು 13 ಲಕ್ಷಣಗಳಿಂದ ಕೂಡಿದೆ.

ಪಾಮರರ ಸುಪವಿತ್ರಗೈಸುವ| ಶ್ರೀ ಮುಕುಂದನ ವಿಮಲಮಂಗಳ
ನಾಮಗಳಿಗಭಿಮಾನಿ ಯಾದ ಉಷಾಖ್ಯದೇವಿಯರು
ಭೂಮಿ ಯೊಳಗುಳ್ಳಖಿಳ ಸಜ್ಜನ-| ರಾಮಯಾದಿಗಳಳಿದು ಸಲಹಲಿ
ಆ ಮರುತ್ತನ ಮನೆಯ ವೈದ್ಯರ ರಮಣಿ ಪ್ರತಿದಿನದಿ (ಹ.ಸಾ. 32-41)

ಭಗವನ್ನಾಮಾಭಿಮಾನ್ಯೈ ಉಷಾದೇವ್ಯೈ ನಮಃ. ತವ ಸುಪ್ರಭಾತಮ್.

ಭಗವಂತನ ನಾಮಗಳಿಗೆ ಅಭಿಮಾನಿ ಎನಿಸಿದ ಉಷಾದೇವಿಯರೇ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

# ದೇವಕೀದೇವಿ - ಯಶೋದಾದೇವಿ

ಉಷಾದೇವಿಯರಿಗೆ ಸಮರೆನಿಸಿದ ದೇವಕೀ, ಯಶೋದಾದೇವಿಯರು ತಾರತಮ್ಯದಲ್ಲಿ ಉಷಾದೇವಿಯಂತೆ ಸ್ವಾಹಾದೇವಿಕಿಂತಲು 10 ಗುಣಗಳಿಂದ ಕಡಿಮೆಯೆನಿಸಿ, 24 ನೇ ಕಕ್ಷದಲ್ಲಿರುವರು. ಸಾಧನೆ 6 ಬ್ರಹ್ಮಕಲ್ಪಗಳು. ಇವರ ದೇಹವು 13 ಲಕ್ಷಣಗಳಿಂದ ಕೂಡಿದೆ.

ಪೃಷ್ಣಿಗರ್ಭ ಮತ್ತು ಅದಿತಿದೇವಿ ಇವೆರಡು ದೇವಕೀದೇವಿಯರ ಅವತಾರಗಳು.

ಆ ವಿರಂಚಾದ್ಯರ ಮನಕೆ ನಿಲು| ಕಾವಕಾಲಕು ಜನನ ರಹಿತನ
ತಾವೊಲಿಸಿ ಮಗನೆಂದು ಮುದ್ದಿಸಿ ಲೀಲೆಗಳ ನೋಳ್ಪ|
ದೇವಕಿಗೆ ವಂದಿಪೆ ಯಶೋದಾ| ದೇವಿಗಾ ನಮಿಸುವೆನು ಬಿಡದೆ ಕೃ-
ಪಾವಲೋಕನದಿಂದ ಸಲಹುವದೆಮ್ಮ ಸಂತತಿಯ (ಹ.ಸಾ. 32-40)

ದೇವಕೀ - ಯಶೋದಾದೇವೀಭ್ಯಾಂ ನಮಃ; ಯುವಯೋಃ ಸುಪ್ರಭಾತಮ್,

ದೇವಕೀ ಯಶೋದಾದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

# 23 ನೇ ಕಕ್ಷ - ಬುಧ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿಬಂದ ಇವರ ಶರೀರವು "ರಜೋ ರಜೋ ರಜೋ" ಗುಣಾತ್ಮಕವಾದುದು. ತಾರತಮ್ಯದಲ್ಲಿ ಸ್ವಾಹಾದೇವಿಗಿಂತಲು 10 ಗುಣಗಳಿಂದ ಕಡಿಮೆ ಎನಿಸಿಕೊಂಡು, 23 ನೇ ಕಕ್ಷದಲ್ಲಿರುವರು. ಸಾಧನೆ 6 ಬ್ರಹ್ಮಕಲ್ಪಗಳು. ಬ್ರಹ್ಮಾಂಡ ದೊಳಗಿರುವ ಎಲ್ಲಾ ಉದಕಗಳಿಗೆ ಅಭಿಮಾನಿಯಾಗಿ, ಆ ಉದಕಗಳಿಗೆ ನಿಯಾಮಕನಾದ ಸುಶೀಲಾಪತಿ ಶ್ರೀ ಕೃಷ್ಣನನ್ನುಪಾಸಿಸುವರು. ಇವರ ದೇಹವು 13 ಲಕ್ಷಣಗಳಿಂದ ಕೂಡಿದೆ. ದ್ವಾಪರಯುಗದಲ್ಲಿ ಅಭಿಮನ್ಯುವಾಗಿ ಅವತರಿಸಿದರು.

ವಿಧಿಪಿತನ ಪದಾಂಬುಜಗಳಿಗೆ| ಮಧುಪನಂತೆ ವಿರಾಜಿಪಾಮಲ
ಉದಕಗಳಿಗೆ ಸದಾಭಿಮಾನಿಯು ಎಂದೆನಿಸಿಕೊಂಬ
ಬುಧಗೆ ನಾ ವಂದಿಸುವೆ ಸನ್ಮೋ| ದದಿ ನಿರಂತರ ಒಲಿದು ಎಮಗ-
ಭ್ಯುದಯ ಪಾಲಿಸಲೆಂದು ಪರಮೋತ್ಸವದಲನುದಿನದಿ (ಹ.ಸಾ. 32-39)

ಬುಧಾಯ ನಮಃ. ತವ ಸುಪ್ರಭಾತಮ್.

ಉದಕಾಭಿಮಾನಿ ಬುಧರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 22 ನೇ ಕಕ್ಷ - ಸ್ವಾಹಾದೇವಿ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದ ಇವರ ಶರೀರವು "ರಜೋ ರಜೋ ರಜೋ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ವಾಗಿಂದ್ರಿಯದಿಂದ ಅಗ್ನಿದೇವರು ಉತ್ಪನ್ನರಾದ 50 ವರ್ಷಗಳ ನಂತರ ಸೃಷ್ಟಿಸಲ್ಪಟ್ಟರು. ತಾರತಮ್ಯದಲ್ಲಿ ಶ್ಯಾಮಲಾದಿಗಳಿಂದ ಕಿಂಚಿತು ಗುಣ ಕಡಿಮೆಯೆನಿಸಿ, 22ನೇ ಕಕ್ಷದಲ್ಲಿರುವರು. ಸಾಧನೆ 6 ಬ್ರಹ್ಮಕಲ್ಪಗಳು. ಇವರು ತಮ್ಮ ಪತಿಯಾದ ಅಗ್ನಿಯಲ್ಲಿರುವ ಪರಶುರಾಮದೇವರನ್ನುಪಾಸಿಸುವರು. ಇವರ ದೇಹ 13 ಲಕ್ಷಣಗಳಿಂದ ಯುಕ್ತವಾಗಿದೆ.

ಸ್ವಾಹಾದೇವ್ಯೈ ನಮಃ. ತವ ಸುಪ್ರಭಾತಮ್.

ಸ್ವಾಹಾದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 21 ನೇ ಕಕ್ಷ - ಅನಾಖ್ಯಾತ ದೇವತೆಗಳು

ತಾರತಮ್ಯದಲ್ಲಿ ಇವರು ಮೇಘಾಭಿಮಾನಿ ಪರ್ಜನ್ಯನಿಂದ ಸ್ವಲ್ಪಗುಣಗಳಿಂದ ಕಡಿಮೆಯೆನಿಸಿ, 21 ನೇ ಕಕ್ಷದಲ್ಲಿರುವರು. ಇವರೆಲ್ಲರ ಸಾಧನೆ 6 ಬ್ರಹ್ಮ ಕಲ್ಪಗಳು. ಇವರ ದೇಹಗಳು 13 ಲಕ್ಷಣಾತ್ಮಕವಾಗಿವೆ.

ಅನಾಖ್ಯಾತ ದೇವತಾಭ್ಯೋ ನಮಃ. ವಃ ಸುಪ್ರಭಾತಮ್.

ಅನಾಖ್ಯಾತ ದೇವತೆಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 20ನೇ ಕಕ್ಷ ಭಾಗೀರಥಿ - ಸಂಜ್ಞಾ - ಶ್ಯಾಮಲಾ - ರೋಹಿಣೀ ಅನಿರುದ್ಧ ಪತ್ನಿ ಉಷಾ, ಮತ್ತು ಪರ್ಜನ್ಯನಾಮಕ ಸೂರ್ಯ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿಬಂದ ಈ ಆರು ಜನರ ಶರೀರಗಳು "ರಜೋ ರಜೋ ರಜೋ" ಗುಣಾತ್ಮಕವಾಗಿವೆ. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ರಸನೇಂದ್ರಿಯದಿಂದ ವರುಣದೇವರು ಉತ್ಪನ್ನರಾದ 20 ವರ್ಷಗಳ ನಂತರ ಭಾಗೀರಥಿಯೂ, ಸಂಜ್ಞಾದೇವಿಯರು ವಾಮಾಕ್ಷಿಯಿಂದ ಸೂರ್ಯದೇವರು ಉತ್ಪನ್ನರಾದ 6 ವರ್ಷದನಂತರವೂ, ಶ್ಯಾಮಲಾದೇವಿಯು ಪೃಷ್ಠ ಭಾಗದಿಂದ ಕುಬೇರದೇವರು ಉತ್ಪನ್ನರಾದ ಒಂದು ವರ್ಷದನಂತರವೂ ಸೃಷ್ಟಿಸಲ್ಪಟ್ಟರು. ರೋಹಿಣೀದೇವಿಯರು ವಿರಾಡ್ರೂಪಿ ಭಗವಂತನ ವಾಮಶ್ರೋತ್ರದಿಂದ

ಚಂದ್ರನು ಉತ್ಪನ್ನನಾದ 9 ವರ್ಷಗಳ ನಂತರವೂ, ಅನಿರುದ್ಧಪತ್ನಿ ಉಷಾದೇವಿಯರು ಮಧ್ಯಮಾಂಗಲಿ ಪರ್ವದಿಂದ ಅನಿರುದ್ಧನು ಜನಿಸಿದ 5 ವರ್ಷಗಳ ನಂತರವೂ, ಪರ್ಜನ್ಯನಾಮಕ ಸೂರ್ಯದೇವರು ದಕ್ಷಿಣಾಕ್ಷಿಯಿಂದ ಕರ್ಮಜದೇವತೆಗಳು ಜನಿಸಿದ 30 ವರ್ಷಗಳ ನಂತರ ಸೃಷ್ಟಿಸಲ್ಪಟ್ಟರು. ತಾರತಮ್ಯದಲ್ಲಿ ಗಣಪತಿಗಿಂತ 2 ಗುಣಗಳಿಂದ ಕಡಿಮೆಯೆನಿಸಿ, 20ನೇ ಕಕ್ಷದಲ್ಲಿರುವರು. ಎಲ್ಲರ ಸಾಧನೆ 6 ಬ್ರಹ್ಮಕಲ್ಪಗಳು. ಭಾಗೀರಥಿಯು ವರುಣನ ಹೆಂಡತಿ. ಸಂಜ್ಞಾ ಸೂರ್ಯನ ಹೆಂಡತಿ. ಶ್ಯಾಮಲಾ ಯಮಧರ್ಮನ ಹೆಂಡತಿ, ರೋಹಿಣಿ ಚಂದ್ರನ ಹೆಂಡತಿ. ಗಂಗಾದೇವಿಯರು ತಾಂಬೂಲಕ್ಕೆ ಅಭಿಮಾನಿಯಾಗಿರುವರು. ಶ್ಯಾಮಲಾದೇವಿಯರು ದ್ವಾಪರಯುಗದಲ್ಲಿ ದೇವಕೀ ಎಂಬ ಹೆಸರಿನಿಂದ ಪಾಂಡುಕುಮಾರ ಧರ್ಮರಾಯನಿಗೆ ಪತ್ನಿಯೆನಿಸಿಕೊಂಡರು. ಅನಿರುದ್ಧಪತ್ನಿ ಉಷಾದೇವಿಯರು ಬ್ರಹ್ಮಾಂಡಕ್ಕೆ ಅಭಿಮಾನಿಯಾಗಿರುವರು.

ಭಾಗೀರಥೀ, ಸಂಜ್ಞಾ, ಶ್ಯಾಮಲಾ, ರೋಹಿಣೀ, ಉಷಾ, ಪರ್ಜನ್ಯಾಖ್ಯದೇವತಾಭ್ಯೋ ನಮಃ. ವಃ ಸುಪ್ರಭಾತಮ್.

ಭಾಗೀರಥೀ, ಸಂಜ್ಞಾ, ಶ್ಯಾಮಲಾ, ರೋಹಿಣೀ, ಉಷಾ ಮತ್ತು ಪರ್ಜನ್ಯರೆಂಬ ಓ ದೇವತೆಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 19 ನೇ ಕಕ್ಷ - ಕರ್ಮಜದೇವತೆಗಳು

ಈ ಕರ್ಮಜ ದೇವತೆಗಳೆಲ್ಲರು ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದರು. ಇವರ ಶರೀರಗಳು "ರಜೋ ರಜೋ ರಜೋ" ಗುಣಾತ್ಮಕವಾದವುಗಳು. ತಾರತಮ್ಯದಲ್ಲಿ ಗಣಪತಿಗಿಂತ ಸ್ವಲ್ಪ ಗುಣಗಳಿಂದ ಕಡಿಮೆ ಎನಿಸಿ 19 ನೇ ಕಕ್ಷದಲ್ಲಿರುವರು. ಎಲ್ಲರ ಸಾಧನೆ 6 ಬ್ರಹ್ಮಕಲ್ಪಗಳು.

ಕರ್ಮಜ ದೇವತಾಭ್ಯೋ ನಮಃ. ವಃ ಸುಪ್ರಭಾತಮ್.

ಕರ್ಮಜದೇವತೆಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 18 ನೇ ಕಕ್ಷ - ವಿಷ್ವಕ್ಸೇನ - ಅಶ್ವಿನೀದೇವತೆಗಳು, ಕುಬೇರ ಮತ್ತು ಶೇಷಶತಸ್ಥರು

ವಿಷ್ವಕ್ಸೇನರು ಸೃಷ್ಟಿಯ ಆದಿಯಲ್ಲಿ ವಾಯುದೇವರಿಂದ ಹುಟ್ಟಿಬಂದರು. ಅಶ್ವಿನೀ ದೇವತೆಗಳು, ಕುಬೇರ ಮತ್ತು ಶೇಷಶತಸ್ಥರು ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದರು. ಇವರ ಶರೀರಗಳು "ರಜೋ ರಜೋ

ಸತ್ತ್ವ" ಗುಣಾತ್ಮಕವಾದವುಗಳು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನಿಂದ ಜನಿಸಿ ಬಂದ ವಿಷ್ವಕ್ಸೇನರು ವೈವಸ್ವತ ಮನುವು ಜನಿಸಿದ 100 ವರ್ಷಗಳನಂತರವೂ, ಕುಬೇರ ದೇವರು ಗಣಪತಿ ಜನಿಸಿದ 8 ವರ್ಷಗಳ ನಂತರವೂ ಸೃಷ್ಟಿಸಲ್ಪಟ್ಟರು. ತಾರತಮ್ಯದಲ್ಲಿ ಮಿತ್ರನಾಮಕ ಸೂರ್ಯದೇವರಿಂದ ಕೆಲವು ಗುಣಗಳಿಂದ ಕಡಿಮೆ ಎನಿಸಿಕೊಂಡು, 18 ನೇ ಕಕ್ಷದಲ್ಲಿರುವರು. ಎಲ್ಲರ ಸಾಧನೆ 8 ಬ್ರಹ್ಮಕಲ್ಪಗಳು. ವಿಷ್ವಕ್ಸೇನರು ದೇವತೆಗಳ ಸೇನಾಧಿಪತಿಯಾಗಿರುವರು. ಅಶ್ವಿನೀ ದೇವತೆಗಳು ಇಬ್ಬರು. ನಾಸತ್ಯ ದಸ್ರ ಇವರ ಹೆಸರುಗಳು. ಇವರು ಸ್ವರ್ಗಲೋಕದ ವೈದ್ಯರು. ತ್ರೇತಾಯುಗದಲ್ಲಿ ವಿವಿಧ, ಮೈಂದ ಎಂಬ ಹೆಸರಿನಿಂದ ವಾನರರಾಗಿ ಅವತರಿಸಿ ರಾಮಚಂದ್ರನ ಸೇವೆ ಗೈದರು. ದ್ವಾಪರ ದಲ್ಲಿ ನಕುಲ ಸಹದೇವರಾಗಿ ಅವತರಿಸಿದರು. ಹಿಂದಿನ ಮನ್ವಂತರದಲ್ಲಿ ನಾಸತ್ಯರು ವಿಭು ಎಂಬ ಹೆಸರಿನಿಂದಲು, ದಸ್ರರು ತ್ರಿಶಿಖಾ ಎಂಬ ಹೆಸರಿನಿಂದಲು ಇಂದ್ರಪದವಿ ಯನ್ನು ಆಳಿದರು. ಇವರು ಘ್ರಾಣತತ್ತ್ವಕ್ಕೆ ಅಭಿಮಾನಿಗಳಾಗಿ ಧನ್ವಾಪತಿ ಶ್ರೀಧರನನ್ನು ಉಪಾಸಿಸುವರು. ಕುಬೇರರು ಶ್ರೋತ್ರತತ್ತ್ವಕ್ಕೆ ಅಭಿಮಾನಿಗಳಾಗಿ "ಪದ್ಮಿನೀ" ಪತಿಯಾದ ವಿಷ್ಣುವನ್ನು ಉಪಾಸಿಸುವರು. ಉತ್ತರದಿಕ್ಕಿಗೆ ಅಭಿಮಾನಿಗಳು. ತ್ರೇತಾಯುಗದಲ್ಲಿ ಕಷ್ಣನ ಎಂಬ ಹೆಸರಿನಿಂದ ಕಪಿಯಾಗಿ ವತರಿಸಿ ರಾಮನನ್ನು ಸೇವಿಸಿದರು. ದ್ವಾಪರದಲ್ಲಿ ಭಗ ದತ್ತ ನೆಂಬ ರಾಜನಾಗಿ ಅವತರಿಸಿದನು.

ಮಾನ ನಿಧಿಗಳೆನಿಸುವ ವಿಷ್ವ-| ಕ್ಸೇನ ಧನಪಾದ್ಯ ನಿಮಿಷರಿಗೆ ಸ|
ಮಾನರೆಂಭತ್ತೈದು ಶೇಷಶತಸ್ಥ ದೇವಗಣ|
ಆ ನಮಿಸುವೆನು ಬಿಡದೆ ಮಿಥ್ಯಾ ಜ್ಞಾನಕಳೆದು ಸುಬೋಧ ವಿತ್ತು ಸ|
ದಾನುರಾಗದ ಲೆಮ್ಮ ಪರಿಪಾಲಿಸಲಿ ಸಂಪದವ (ಹ.ಸಾ. 32-32)

ವಿಷ್ವಕ್ಸೇನ, ನಾಸತ್ಯ, ದಸ್ರ, ಕುಬೇರ, ಶೇಷಶತಸ್ಥ ದೇವತಾಭ್ಯೋ ನಮಃ. ವಃ ಸುಪ್ರಭಾತಮ್.

ವಿಷ್ವಕ್ಸೇನ, ನಾಸತ್ಯ, ದಸ್ರ, ಕುಬೇರ, ಶೇಷತಸ್ಥರೆನಿಸುವ 85 ಜನ ದೇವತೆಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## ಗಣಪತಿ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ವೈಕಾರಿಕ ರುದ್ರರಿಂದ ಹುಟ್ಟಿಬಂದ ಬೃಹಸ್ಪತ್ಯಾಚಾರ್ಯರು ಇವರ ಹುಟ್ಟಿಗೆ ಕಾರಣರು. ಇವರ ಶರೀರವು "ರಜೋ ರಜೋ ಸತ್ತ್ವ" ಗುಣಾತ್ಮಕವಾದದು. ಕುಬೇರ, ವಿಷ್ವಕ್ಸೇನರಿಗೆ ಸಮರೆನಿಸಿ ತಾರ ತಮ್ಯದಲ್ಲಿ ಮಿತ್ರನಾಮಕ ಸೂರ್ಯನಿಂದ ಕೆಲವು ಗುಣಗಳಿಂದ ಕಡಿಮೆ ಎನಿಸಿಕೊಂಡು,

18 ನೇ ಕಕ್ಷದಲ್ಲಿರುವರು. ಸಾಧನೆ 8 ಬ್ರಹ್ಮಕಲ್ಪಗಳು. ಆಕಾಶತತ್ತ್ವಕ್ಕೆ ಅಭಿಮಾನಿಗಳಾಗಿ "ಸುಗಂಧೀ" ಪತಿಯಾದ ಅಚ್ಯುತನನ್ನು ಉಪಾಸಿಸುವರು. ನಾಭಿಯಲ್ಲಿರುವ 4 ದಳದ ಕರ್ಣಿಕೆಯಲ್ಲಿದ್ದು ಅದಕ್ಕೆ ಅಭಿಮಾನಿಯಾಗಿರುವರು. ಭಗವದರ್ಪಣೆಗಾಗಿ ಇಟ್ಟ ಪದಾರ್ಥಗಳ ಮೇಲೆ ಮುಚ್ಚಲ್ಪಟ್ಟ ವಸ್ತ್ರದಲ್ಲಿ ಸದಾ ಸನ್ನಿಹಿತರಾಗಿದ್ದು, ನೈವೇದ್ಯಕಾಲದಲ್ಲಿ ಶ್ರೀಹರಿಯ ಸೇವೆಯನ್ನು ಮಾಡುವರು. ದ್ವಾಪರಯುಗದಲ್ಲಿ ಚಾರುದೇಷ್ಣ ಎನ್ನುವ ಹೆಸರಿನಿಂದ ಕೃಷ್ಣಪತ್ನಿ ರುಕ್ಮಿಣಿಗೆ ಮಗನಾಗಿ ಜನಿಸಿದರು. ಇವರ ಸ್ತುತಿಯಿಂದ ನಿಸ್ಸಂಗತ್ವವು ಪ್ರಾಪ್ತವಾಗಿ, ಭಗವಂತನನ್ನು ಅನುಸರಿಸುವ ಮತಿಯು ಬೆಳೆಯುತ್ತದೆ.

ಧನಪ ವಿಷ್ವಕ್ಸೇನ ವೈದ್ಯಾ| ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ|
ನನುಜ ಶೇಷಶತಸ್ಥ ದೇವೋತ್ತಮ ವಿಯದ್ಗಂಗಾ|
ವಿನುತ ವಿಶ್ವೋಪಾಸಕನೆ ಸ| ನ್ಮನದಿ ವಿಜ್ಞಾಪಿಸುವೆ ಲಕ್ಷ್ಮೀ|
ವನಿತೆಯರಸನ ಭಕ್ತಿಜ್ಞಾನವ ಕೊಟ್ಟು ಸಲಹುವದು (ಹ.ಸಾ. 28-4)

ಗಣಪತ್ಯೈ ನಮಃ. ತವ ಸುಪ್ರಭಾತಮ್.

ವಿಘ್ನರಾಜರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 17 ನೇ ಕಕ್ಷ - ಮಿತ್ರನಾಮಕ ಸೂರ್ಯ - ನಿಋುಋುತಿ, ಪ್ರಾವಹೀದೇವಿ - ತಾರಾದೇವಿ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿ ಬಂದ ಇವರ ಶರೀರಗಳು "ರಜೋ ರಜೋ ಸತ್ವ" ಗುಣಾತ್ಮಕವಾದವುಗಳು. ತಾರತಮ್ಯದಲ್ಲಿ ಇವರು ವಿಶ್ವಾಮಿತ್ರಾದಿ ಋಷಿಗಳಿಗಿಂತ 2 ಗುಣಗಳಿಂದ ಕಡಿಮೆ ಎನಿಸಿಕೊಂಡು, 17 ನೇ ಕಕ್ಷದಲ್ಲಿರುವರು.' ಎಲ್ಲರ ಸಾಧನೆ 9 ಬ್ರಹ್ಮಕಲ್ಪಗಳು. ಮಿತ್ರನಾಮಕ ಸೂರ್ಯದೇವರು ಕಶ್ಯಪ ಋಷಿಯ ಮಕ್ಕಳು. ವಾಯುತತ್ತ್ವಕ್ಕೆ ಅಭಿಮಾನಿಗಳೆನಿ " ಹಿರಣ್ಯಾ" ಪತಿಯಾದ ಸಂಕರ್ಷಣನನ್ನು ಉಪಾಸಿಸುವರು. ದ್ವಾಪರಯುಗದಲ್ಲಿ ರುಕ್ಮಿಣಿಯ ತಂದೆಯಾದ ಭೀಷ್ಮಕರಾಯನಾಗಿ ಅವತರಿಸಿದರು. ಪತ್ರಶಾಖ (ಎಲೆಗಳಿಂದ ಮಾಡಿದ ಪದಾರ್ಥಗಳು) ಕ್ಕೆ ಅಭಿಮಾನಿಯಾಗಿರುವರು. ಇವರ ಪ್ರಾರ್ಥನೆಯಿಂದ ಆಸನ ಸಿದ್ಧಿಯೊಟ್ಟಿಗೆ ಶ್ವಾಸ ನಿರೋಧಕ ಶಕ್ತಿಯು ಲಭಿಸುವುದು. ನಿಋುಋುತಿಗಳು ಉಪ್ಪಿಗು, ನೈರುತಿದಿಕ್ಕಿಗು ಅಭಿಮಾನಿಯಾಗಿರುವರು. ಇವರು ತ್ರೇತಾಯುಗದಲ್ಲಿ "ದುರ್ಮುಖ"ನೆಂಬ ಕಪಿಯಾಗಿಯು, ದ್ವಾಪರದಲ್ಲಿ ರುದ್ರಾವೇಶದಿಂದ ಘಟೋತ್ಕಜರಾಗಿಯು ಅವತರಿಸಿದರು. ಬೃಹಸ್ಪತ್ಯಾಚಾರ್ಯರ ಪತ್ನಿ ತಾರಾದೇವಿಯರು ತ್ರೇತಾಯುಗದಲ್ಲಿ "ತಾರಾ" ಎಂಬುವ ಕಪಿಯ ಪತ್ನಿಯಾಗಿಯು, ದ್ವಾಪರದಲ್ಲಿ ಕೃಪಿ ಎಂಬ ಹೆಸರಿನಿಂದ ದ್ರೋಣಾ

ಚಾರ್ಯರಿಗೆ ಪತ್ನಿಯಾಗಿ ಅವತರಿಸಿದರು. ಇವರೆಲ್ಲರ ದೇಹಗಳು 17 ಲಕ್ಷಣಗಳಿಂದ ಕೂಡಿದವು.

ದ್ವಾದಶಾದಿತ್ಯರೊಳು ಮೊದಲಿಗ| ನಾದ ಮಿತ್ರ ಪ್ರವಹಮಾನಿನಿ
ಯಾದ ಪ್ರಾವಹಿ, ನಿಋತಿ ನಿರ್ಜರ ಗುರು ಮಹಿಳೆ ತಾರಾ
ಈ ದಿವೌಕಸರನುದಿ ನಾಧಿ| ವ್ಯಾಧಿ ಉಪಟಳವಳಿದು ವಿಬುಧರಿ|
ಗಾದರದಿ ಕೊಡಲಖಿಳ ಮಂಗಳವಾವ ಕಾಲದಲಿ (ಹ.ಸಾ. 32-31)

ಮಿತ್ರನಾಮಕಸೂರ್ಯ, ನಿಋತಿ, ಪ್ರಾವಹೀ ತಾರಾದೇವೀಭ್ಯೋ ನಮಃ. ವಃ ಸುಪ್ರಭಾತಮ್.

ಮಿತ್ರನಾಮಕ ಸೂರ್ಯರೇ, ನಿಋಋತಿಗಳೇ, ಪ್ರಾವಹೀದೇವಿಯರೇ, ತಾರಾ ದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 16 ನೇ ಕಕ್ಷ -ಮರೀಚಿ - ಅತ್ರಿ - ಅಂಗೀರಸ - ಪುಲಸ್ತ್ಯ - ಪುಲಹ - ಕ್ರತು - ವಶಿಷ್ಠ - ವಿಶ್ವಾಮಿತ್ರ - ವೈವಸ್ವತಮನು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿ ಬಂದ ಇವರ ಶರೀರಗಳು "ರಜೋ ರಜೋ ಸತ್ವ" ಗುಣಾತ್ಮಕವಾದವುಗಳು. ಪದ್ಮಕಲ್ಪ ದಲ್ಲಿ ವಿರಾಡ್ರೂಪಿ ಭಗವಂತನ ಮನಸ್ಸಿನಿಂದ ಮರೀಚಿ, ನೇತ್ರದಿಂದ ಅತ್ರಿ, ಮುಖದಿಂದ ಅಂಗೀರಸ, ಕಿವಿಯಿಂದ ಪುಲಸ್ತ್ಯ, ಹೊಕ್ಕಳಿಂದ ಪುಲಹ, ಕರದಿಂದ ಕ್ರತು, ಪ್ರಾಣದಿಂದ ವಶಿಷ್ಠರು ಸೃಷ್ಟಿಸಲ್ಪಟ್ಟರು. ಅತ್ರಿಗಳು ಹುಟ್ಟಿದ 10 ವರ್ಷಗಳ ನಂತರ ವಶಿಷ್ಠರು, ವಶಿಷ್ಠರು ಹುಟ್ಟಿದ - 10 ವರ್ಷಗಳ ನಂತರ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ ಪುಲಹ, ಕ್ರತು ಜನಿಸಿದರು. ಜಮದಗ್ನಿಗಳು ಹುಟ್ಟಿದ 10 ವರ್ಷಗಳ ನಂತರ ವೈವಸ್ವತ ಮನು ಜನಿಸಿದರು. ಇವರೆಲ್ಲರು ತಾರತಮ್ಯದಲ್ಲಿ ಭೃಗು, ಅಗ್ನಿಗಳಿಂದ 2 ಗುಣಕಡಿಮೆ ಎನಿಸಿ ಕೊಂಡು 16 ನೇ ಕಕ್ಷದದಲ್ಲಿರುವರು. ಎಲ್ಲರ ಸಾಧನೆ 9 ಬ್ರಹ್ಮಕಲ್ಪಗಳು. ಇವರೆಲ್ಲರ ದೇಹಗಳು 18 ಲಕ್ಷಣಗಳಿಂದ ಕೂಡಿವೆ.

ಶತಧೃತಿಯ ಸುತರೀರ್ವರುಳಿದ- ಪ್ರತಿಮ ಸುತಪೋನಿಧಿಗಳ ಪರಾ|
ಜಿತನ ಸುಸಮಾಧಿಯೊಳೊಲಿಸಿ ಮೂರ್ಲೋಕ ದೊಳು ಮೆರೆವ
ವ್ರತಿವರ ಮರೀಚ್ಯತ್ರಿ ಪುಲಹಾ| ಕ್ರತು ವಶಿಷ್ಠ ಪುಲಸ್ತ್ಯ ವೈವ
ಸ್ವತನು ವಿಶ್ವಾಮಿತ್ರರಂಗಿರರಂಘ್ರಿ ಗೆರಗುವೆನು (ಹ.ಸಾ. 32-30)

ಮರೀಚಿ - ಅತ್ರಿ - ಅಂಗೀರಸ - ಪುಲಸ್ತ್ಯ - ಪುಲಹ - ಕ್ರತು - ವಶಿಷ್ಠ - ವಿಶ್ವಾಮಿತ್ರ - ವೈವಸ್ವತ ಮನುಭ್ಯೋ ನಮಃ. ವಃ ಸುಪ್ರಭಾತಮ್.

ಮರೀಚಿ - ಅತ್ರಿ - ಅಂಗೀರಸ - ಪುಲಸ್ತ್ಯ - ಪುಲಹ - ಕ್ರತು - ವಶಿಷ್ಠ - ವಿಶ್ವಾಮಿತ್ರ - ವೈವಸ್ವತ ಮನುಗಳೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 15 ನೇ ಕಕ್ಷ - ಭೃಗು ಋಷಿ - ಅಗ್ನಿದೇವರು - ಪ್ರಸೂತಿದೇವಿ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸ ರುದ್ರನಿಂದ ಜನಿಸಿಬಂದ ಇವರ ಶರೀರಗಳು "ರಜೋ ರಜೋ ಸತ್ವ ಗುಣಾತ್ಮಕವಾದವುಗಳು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ಭ್ರೂಮಧ್ಯದಿಂದ ಭೃಗುಋಷಿಗಳು, ವಾಗಿಂದ್ರಿಯದಿಂದ ಅಗ್ನಿದೇವರು, ದಕ್ಷಪ್ರಜಾಪತಿಗಳು ಹುಟ್ಟಿದ 5 ವರ್ಷಗಳ ನಂತರ ಪ್ರಸುತಿದೇವಿಯರು ಜನಿಸಿದರು. ತಾರತಮ್ಯದಲ್ಲಿ ನಾರದರಿಗಿಂತ ಪಾದಾರ್ಧ ($\frac{1}{8}$ ಭಾಗ) ಗುಣದಿಂದ ಕಡಿಮೆ ಎನಿಸಿಕೊಂಡು, 15 ನೇ ಕಕ್ಷ ದಲ್ಲಿರುವರು. ಎಲ್ಲರ ಸಾಧನೆ 9 ಬ್ರಹ್ಮಕಲ್ಪಗಳು. ಭೃಗುಋಷಿಗಳು ದ್ವಾಪರಯುಗದಲ್ಲಿ ವ್ಯಾಧನಾಗಿ ಅವತರಿಸಿದರು. ಜ್ಞಾನಾರ್ಥವಾಗಿ ಇವರ ಪಾದಧ್ಯಾನ ಮಾಡಿದರೆ ನಿರ್ಮಲಜ್ಞಾನ ಸಿದ್ಧಿಸುತ್ತದೆ. ಅಗ್ನಿದೇವರು ತೇಜಸ್ತತ್ವಕ್ಕೆ ಅಭಿಮಾನಿಗಳಾಗಿ "ವಿದ್ಯಾ"ಪತಿಯಾದ ಉಪೇಂದ್ರನನ್ನು ಉಪಾಶಿಸುವರು. ಪ್ರತಿಮನೆಯಲ್ಲಿರುವ ಅಡುಗೆ ಮಾಡುವ ವಲೆಗಳಲ್ಲಿ ಸದಾಸನ್ನಿಹಿತನಾಗಿರುವರು. ಇವರು ವಾಗಾಭಿಮಾನಿಗಳು. ವಾಜಪೇಯ, ಉಪವಾಸಾದಿ ವ್ರತಗಳನ್ನು ಸಾಧಿಸಬೇಕಾದರೆ ಇವರನ್ನು ಶರಣುಹೋಗಬೇಕು. ಸಾಂಶ ದೇವತೆಗಳೆನಿಸಿದ ಅಗ್ನಿದೇವರು ತ್ರೇತಾಯುಗದಲ್ಲಿ "ನೀಲ"ನೆಂಬ ಕಪಿಯಾಗಿಯು, ರಾಮಚಂದ್ರನ ಪುತ್ರ ಲವನಾಗಿಯು ಜನಿಸಿದರು. ದ್ವಾಪರಯುಗದಲ್ಲಿ ದೃಷ್ಟದ್ಯುಮ್ನನಾಗಿ ಅವತರಿಸಿದರು.

ಆ ಸರಸ್ವತಿ ತೀರದಲಿ ಬಿ-ನ್ನೈಸಲಾ ಮುನಿಗಳ ನುಡಿಗೆ ಜಡ|
ಜಾಸನ ಮಹೇಶಾಚ್ಯುತರ ಲೋಕಂಗಳಿಗೆ ಪೋಗಿ|
ತಾ ಸಕಲಗುಣಗಳ ವಿಚಾರಿಸೆ| ಕೇಶವನೆ ಪರದೈವವೆಂದುಪ|
ದೇಶಿಸಿದ ಭೃಗುಮುನಿಪ ಕೊಡಲೆಮಗಖಿಳ ಪುರುಷಾರ್ಥ (ಹ.ಸಾ. 32-27)

ಬಿಸರುಹಾಂಬಕನಾಜ್ಞೆಯಲಿ ಸುಮ| ನಸಮುಖನು ತಾನೆನಿಸಿ ನಾನಾ|
ರಸಗಳುಳ್ಳ ಹವಿಸ್ಸುಗಳ ನವರವರಿಗೊಯ್ದಾವ
ವಸುಕುಲಾಧಿಪ ಯಜ್ಞಪುರುಷನ| ಅಸಮ ಬಲರೂಪಂಗಳಿಗೆ ವಂ|
ದಿಸುವೆ ಜ್ಞಾನ ಯಶಸ್ಸು ವಿದ್ಯಾಬುದ್ಧಿ ಕೊಡಲೆಮಗೆ (ಹ.ಸಾ. 32-28)
ತಾತನಪ್ಪಣೆಯಿಂದ ನೀ ಪ್ರ|ಖ್ಯಾತಿ ಯುಳ್ಳರುವತ್ತು ಮಕ್ಕಳ|

ಪ್ರೀತಿಯಿಂದಲಿ ಪಡೆದವರವರಿಗಿತ್ತು ಮನ್ನಿಸಿದೆ|
ವೀತಿಹೋತ್ರನ ಸಮಳೆನಿಸುವ ಪ್ರ|ಸೂತಿ ಜನನಿ ತ್ವದಂಘ್ರಿ ಕಮಲಕೆ
ನಾ ತುತಿಸಿ ತಲೆವಾಗುವೆಮ್ಮ ಕುಟುಂಬ ಸಲಹುವುದು (ಹ.ಸಾ. 32-29)

ಭೃಗು ಅಗ್ನಿ, ಪ್ರಸೂತಿ ದೇವೀಭ್ಯಃ ನಮಃ ವಃ ಸುಪ್ರಭಾತಮ್

ಭೃಗು ಋಷಿಗಳೇ, ಅಗ್ನಿದೇವರೇ, ಪ್ರಸೂತಿದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 14ನೇ ಕಕ್ಷ - ನಾರದರು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದ ಇವರ ಶರೀರವು "ರಜೋ ರಜೋ ಸತ್ತ್ವ" ಗುಣಾತ್ಮಕವಾದದ್ದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಪರಮಾತ್ಮನ ತೊಡೆಯಿಂದ ಹುಟ್ಟಿದ ಇವರು ವರುಣನು ಸೃಷ್ಟಿಯಾದ 10 ವರ್ಷಗಳ ನಂತರ ಹುಟ್ಟಿದರು. ತಾರತಮ್ಯದಲ್ಲಿ ವರುಣನಿಂದ ಸ್ವಲ್ಪ ಗುಣಗಳಿಂದ ಕಡಿಮೆ ಎನಿಸಿಕೊಂಡು, 14ನೇ ಕಕ್ಷದಲ್ಲಿರುವರು. ಸಾದನೆ 9 ಬ್ರಹ್ಮಕಲ್ಪಗಳು. ಶ್ರೀಹರಿ ಇವರಿಗೆ ದೇವತ್ವ, ಋಷಿತ್ವ, ಗಂಧರ್ವತ್ವ ಈ ಮೂರನ್ನು ಕರುಣಿಸಿರುವನು. ಶ್ರೀಹರಿಯ ಕರುಣೆಯಿಂದ ಸರ್ವಲೋಕಗಳಲ್ಲಿ ಸಂಚರಿಸುವ ಶಕ್ತಿ ಉಳ್ಳ ಇವರು ಕೆಲವೊಮ್ಮೆ ಸೋತ್ತಮರಿಗೂ ಸಹ ಜ್ಞಾನ, ಭಕ್ತಿ ವೈರಾಗ್ಯ ಕಲಿಸುವಲ್ಲಿ ಗುರುತ್ವವನ್ನು ಪಡೆದಿರುವರು. ಇವರ ಮೊರೆ ಹೊಕ್ಕರೆ ಲಜ್ಜಾರಹಿತನಾಗಿ ಭಕ್ತಿಯಿಂದ ಗಾನ ಮಾಡುವ ಭಾಗ್ಯ ದೊರೆಯುವುದು.

ಫಣಿಯೊಳೊಪ್ಪುವ ತಿಲಕ ತುಲಸೀ| ಮಣಿ ಗಣಾಂಚಿತ ಕಂಠ ಕರದಲಿ
ಕ್ವಣಿತ ವೀಣಾ ಸುಸ್ವರದಿ ಬಹುತಾಳಗತಿಗಳಲಿ
ಪ್ರಣವ ಪ್ರತಿಪಾದ್ಯನ ಗುಣಂಗಳ| ಕುಣಿದು ಪಾಡುತ ಪರಮಸುಖ ಸಂ|
ದಣಿಯೊಳಾಡುವ ದೇವಋಷಿನಾರದರಿಗಭಿನಮಿಸುವೆ (ಹ.ಸಾ. 32-26)

ದೇವ ಋಷಿ ನಾರದಾಯ್ಯೈ ನಮಃ. ತವ ಸುಪ್ರಭಾತಮ್.
ನಾರದರೇ, ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 13ನೇ ಕಕ್ಷ ವರುಣದೇವರು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದ ಇವರ ಶರೀರವು "ರಜೋ ರಜೋ ಸತ್ತ್ವ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ರಸನೇಂದ್ರಿಯದಿಂದ ಜನಿಸಿಬಂದ ಇವರು, ವಿವಸ್ವಾನ್ನಾ

ಮಕ ಸೂರ್ಯನು ಜನಿಸಿದ 100 ವರ್ಷಗಳ ನಂತರ ಸೃಷ್ಟಿಸಲ್ಪಟ್ಟರು. ತಾರತಮ್ಯದಲ್ಲಿ ಸೂರ್ಯನಿಂದ ಪಾದಪಾದಾರ್ಧ ($\frac{1}{8}$) ಗುಣದಿಂದ ಕಡಿಮೆ ಎನಿಸಿಕೊಂಡು, 13 ನೇ ಕಕ್ಷದಲ್ಲಿರುವರು. ಸಾಧನೆ 9 ಬ್ರಹ್ಮಕಲ್ಪಗಳು. ಇವರ ಶರೀರವು 20 ಲಕ್ಷಣಗಳಿಂದ ಯುಕ್ತವಾದುದು. ಇವರು ಜಿಹ್ವಾತತ್ತ್ವಕ್ಕೆ ಅಭಿಮಾನಿಗಳಾಗಿ "ಸುಶೀಲಾ" ಪತಿಯಾದ ಶ್ರೀಹರಿಯನ್ನು ಉಪಾಸಿಸುವರು. ವೃಷಾಕಪಿಯಾದ ವಾಮನನನ್ನು ಉಪಾಸಿಸುವರು. ಪಶ್ಚಿಮ ದಿಕ್ಕಿಗೆ ಅಧಿಪತಿಗಳು. ಬ್ರಹ್ಮನ ಶಾಪದಿಂದ ಆದಿಯಲ್ಲಿ "ಮಹಾಭಿಷಕ್" ಎಂಬ ರಾಜನಾಗಿ ಅವತರಿಸಿ, ಮುಂದೆ ತ್ರೇತೆಯಲ್ಲಿ "ಸುಷೇಣ" ಎಂಬ ಕಪಿಯಾಗಿಯೂ, ದ್ವಾಪರದಲ್ಲಿ ಶಂತನು ಚಕ್ರವರ್ತಿಯಾಗಿಯೂ ಅವತರಿಸಿದರು. ಉಪನಿಷತ್ ವಚನದಂತೆ ಇವರಿಗೆ "ದುರ್ದರ" ಎಂಬುವ ಕಪ್ಪೆಯ ರೂಪವು ಸಹ ಇರುವುದು.

ಲೋಕ ಮಾತೆಯ ಪಡೆದು ನೀ ಜಗ| ದೇಕ ಪಾತ್ರನಿಗಿತ್ತ ಕಾರಣ
ಶ್ರೀ ಕುಮಾರಿ ಸಮೇತ ನೆಲಸಿದ ನಿನ್ನ ಮಂದಿರದಿ
ಆ ಕಮಲಭವಮುಖರು ಬಿಡದೆ ಪ| ರಾಕೆನುತ ನಿಂದಿಹರೋ ಗುಣ ರ|
ತ್ನಾಕರನೆ ಬಣ್ಣಿಸಲಳವೆ ಕೊಡು ಎಮಗೆ ಸನ್ಮನವ (ಹ.ಸಾ. 32-25)

ವರುಣಾಯ ನಮಃ. ತವ ಸುಪ್ರಭಾತಮ್.

ವರುಣದೇವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 12ನೇ ಕಕ್ಷ - ಸೂರ್ಯ, ಚಂದ್ರ, ಯಮ, ಶತರೂಪದೇವಿಯರು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದ ಇವರ ಶರೀರಗಳು "ರಜೋ ರಜೋ ಸತ್ವ" ಗುಣಾತ್ಮಕವಾದವುಗಳು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ದಕ್ಷಿಣಾಕ್ಷಿಯಿಂದ ಸೂರ್ಯದೇವರು, ದಕ್ಷಿಣ ಶ್ರೋತ್ರದಿಂದ ಚಂದ್ರದೇವರು, ಬೆನ್ನಿನಿಂದ ಯಮದೇವರು, ಮನಸ್ಸಿನಿಂದ ಶತಾರೂಪದೇವಿಯರು ಬಂದರು. ಸೂರ್ಯನು, ಚಂದ್ರನು ಹುಟ್ಟಿದ 30 ವರ್ಷಗಳ ನಂತರ, ಚಂದ್ರನು ಯಮನು ಹುಟ್ಟಿದ 30 ವರ್ಷಗಳನಂತರ, ಯಮನು ಪ್ರವಾಹವಾಯುದೇವರು ಜನಿಸಿದ 100 ವರ್ಷಗಳ ನಂತರವು, ಶತರೂಪಾದೇವಿಯರು ಸ್ವಾಯಂಭುವ ಮನುವು ಹುಟ್ಟಿದ 5 ವರ್ಷಗಳ ಮೇಲೆ ಜನಿಸಿದರು. ತಾರತಮ್ಯದಲ್ಲಿ ಇವರು ಪ್ರವಹವಾಯುದೇವರಿಂದ 2 ಗುಣಗಳಿಂದ ಕಡಿಮೆ ಎನಿಸಿಕೊಂಡು, 12ನೇ ಕಕ್ಷದಲ್ಲಿರುವರು. ಎಲ್ಲರ ಸಾಧನೆ 10 ಬ್ರಹ್ಮಕಲ್ಪಗಳು. ಚಕ್ಷುತತ್ತ್ವಕ್ಕೆ ಅಭಿಮಾನಿಗಳಾದ ವಿಶ್ವಾನ್ನಾಮಕ ಸೂರ್ಯದೇವರು ಆ ತತ್ತ್ವಕ್ಕೆ ಅಭಿಮಾನಿಯಾದ "ರಮಾ" ಪತಿ ತ್ರಿವಿಕ್ರಮನನ್ನು ಉಪಾಸಿಸುತ್ತಾರೆ. ಇವರೇ ಭಕ್ಷ್ಯಗಳಿಗೂ ಅಭಿಮಾನಿಯಾಗಿರುವರು. ಜೀವಿಗಳ ಸಕಲ ಕರ್ಮಗಳಿಗೆ ಸಾಕ್ಷೀ

ಭೂತರಾಗಿರುವರು. ತ್ರೇತಾಯುಗದಲ್ಲಿ ಬ್ರಹ್ಮಾವಿಷ್ಟ ಸುಗ್ರೀವನಾಗಿಯು, ದ್ವಾಪರದಲ್ಲಿ ಹರಿಯಾವೇಶ ಯುಕ್ತನಾದ ಕರ್ಣನಾಗಿಯು ಅವತರಿಸಿದರು. ಚಂದ್ರದೇವರು ಶ್ರೋತ್ರ ತತ್ತ್ವಕ್ಕೆಅಭಿಮಾನಿಗಳಾಗಿ "ಪದ್ಮಿನೀ" ಪತಿ ವಿಷ್ಣುವನ್ನು ಉಪಾಸಿಸುತ್ತಾರೆ. ಪ್ರತಿ ಜೀವಿಯ ಎಡಗಣ್ಣಿನಲ್ಲಿ ನಿಂತಿರುವ ಚಂದ್ರದೇವರು ಅನ್ನಕ್ಕೂ ಮೊಸರಿಗೂ ಅಭಿಮಾನಿಗಳಾಗಿ ರುವರು. ತ್ರೇತಾಯುಗದಲ್ಲಿ ಇಂದ್ರನ ಆವೇಶದಿಂದ ಅಂಗದನಾಗಿ ಅವತರಿಸಿದರು. ಇವರ ಅನುಗ್ರಹದಿಂದ ಪರಮಾತ್ಮನ ಕಥಾಶ್ರವಣದಲ್ಲಿ ರತಿ ಉಂಟಾಗುತ್ತದೆ. ಯಮ ದೇವರು ಶ್ರೋತ್ರ ತತ್ತ್ವಕ್ಕೆ ಅಭಿಮಾನಿಯಾಗಿ "ಪದ್ಮಿನಿ" ಪತಿ ವಿಷ್ಣುವನ್ನು ಉಪಾಸಿಸು ವರು. ಕಟು (ವಗರು) ಪದಾರ್ಥಗಳಿಗೆ ಅಭಿಮಾನಿಯಾದ ಇವರು ದಕ್ಷಿಣ ದಿಕ್ಕಿಗೂ ಅಧಿಪತಿಗಳಾಗಿರುವರು. ಯಮದೇವರು 14 ಮಂದಿ ಇಂದ್ರರಲ್ಲಿ ಸತ್ಯಜಿತು ಎಂಬ ಹೆಸರಿನಿಂದ ಇಂದ್ರಪದವಿ ಆಳಿದರು. ಆದಿಯಲ್ಲಿ ಬ್ರಹ್ಮಾವೇಶದಿಂದ ಕೂಡಿದ ಜಾಂಬ ವಂತರಾಗಿಯು, ದ್ವಾಪರದಲ್ಲಿ ವಿದುರರಾಗಿಯು, ವಾಯುವಾವೇಶದಿಂದ ಕೂಡಿದ ಯುಧಿಷ್ಠರರಾಗಿಯು ಅವತರಿಸಿದರು.

ಶ್ರೀ ವನರುಹಾಂಬಕನ ನೇತ್ರಗ| ಳೀವೆ ಮನೆಯೆನಿಸಿ ಸುಜನರಿಗೆ ಕ
ರಾವಲಂಬನವೀವ ತೆರದಿ ಮಯೂಖ ವಿಸ್ತರಿಪ
ಆವಿವಸ್ವಾನೆಂದೆನಿಸುವ ವಿ| ಭಾವಸುವಹರ್ನಿಶಿಗಳಲಿ ಕೊಡ|
ಲೀವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ (ಹ.ಸಾ. 32-24)

ಮಧುವಿರೋಧಿಮನೋಜ ಕ್ಷೀರೋ| ದಧಿ ಮಥನ ಸಮಯದಲುದಿಸಿ ನೆರೆ
ಕುಧರಜಾವಲ್ಲಭನ ಮಸ್ತಕ ಮಂದಿರದಿ ಮೆರೆವ
ವಿಧು ತವಾಂಘ್ರಿ ಪಯೋಜ ಯುಗಳಕೆ| ಮಧುಪನಂದದಲೆರಗಲೆನ್ನನ|
ದಧಿಪ ವಂದಿಪೆನನುದಿನಂತಸ್ತಾಪ ಪರಿಹರಿಸು (ಹ.ಸಾ. 32-23)

ನರನ ನಾರಾಯಣನ ಹರಿ ಕೃ| ಷ್ಣರ ಪಡೆದೆ ಪುರುಷಾರ್ಥ ತೆರದಲಿ
ತರಣಿ ಶಶಿ ಶತರೂಪರಿಗೆ ಸಮನೆನಿಸಿ ಪಾಪಿಗಳ|
ನಿರಯದೊಳು ನೆಲೆಗೊಳಿಸಿ ಸಜ್ಜನ | ನೆರವಿಯನು ಪಾಲಿಸುವ ಔಮಂ|
ಬರ ಸಲಹು ಸಲಹೆಮ್ಮಬಿಡದಲೆ ಪರಮ ಕರುಣದಲಿ (ಹ.ಸಾ. 32-22)

ಜನರನುದ್ಧರಿಸುವೆನೆನುತ ನಿಜ| ಜನಕನನುಮತದಲಿ ಸ್ವಯಂಭುವ|
ಮನುವಿನಿಂದಲಿ ಪಡೆದೆ ಸುಕುಮಾರಕರನೊಲಿಮೆಯಲಿ
ಜನನಿ ಶತ ರೂಪಾನಿತಂಬಿನಿ| ಮನವಚನ ಕಾಯದಲಿ ಬಿಡದನು|
ದಿನ ನಮಿಸುವೆನು ಕೊಡು ಎಮಗೆ ಸನ್ಮಂಗಳವ ನೊಲಿದು (ಹ.ಸಾ. 32-21)

ಸೂರ್ಯ, ಚಂದ್ರ, ಯಮಧರ್ಮ ಶತರೂಪಾದೇವೀಭ್ಯೋ ನಮಃ. ವಃ ಸುಪ್ರಭಾತಮ್.

ಸೂರ್ಯ, ಚಂದ್ರ, ಯಮಧರ್ಮರಾಜ, ಶತರೂಪಾದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 11 ನೇ ಕಕ್ಷ - ಪ್ರವಾಹ ವಾಯುದೇವರು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ತೈಜಸರುದ್ರನಿಂದ ಜನಿಸಿಬಂದ ಇವರ ಶರೀರವು "ರಜೋ ರಜೋ ಸತ್ತ್ವ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ಕನಿಷ್ಠಾಂಗುಲಿ ಪರ್ವದಿಂದ ಜನಿಸಿಬಂದ ಇವರು, ಅನಿರುದ್ಧನು ಹುಟ್ಟಿದ 100 ವರ್ಷಗಳ ನಂತರ ಜನಿಸಿಬಂದರು. ತಾರತಮ್ಯದಲ್ಲಿ ಸ್ವಾಯಂಭುವ ಮನುವಿಗಿಂತಲು 5 ಗುಣಗಳಿಂದ ಕಡಿಮೆ ಎನಿಸಿಕೊಂಡು, 11 ನೇ ಕಕ್ಷದಲ್ಲಿರುವರು. ಸಾಧನೆ 12 ಬ್ರಹ್ಮಕಲ್ಪಗಳು. ಇವರು ವಾಯುತತ್ತ್ವಕ್ಕೆ ಅಭಿಮಾನಿಗಳಾಗಿ "ಸುಂದರೀ" ಪತಿ ಜನಾರ್ದನನ್ನು ಉಪಾಸಿಸುವರು.

ಭವಪನಧಿ ನವ ಪೋತ ಪುಣ್ಯ ಶ್ರವಣ ಸಾಧನ ಕೀರ್ತನ ಪಾದವನರುಹ
ಭವನ ನಾವಿಕನಾಗಿ ಭಜಕರ ತಾರಿಸುವ ಬಿಡದೆ
ಪ್ರವಹ ಮಾರುತ ದೇವ ಪರಮೋ| ತ್ಸವ ವಿಶೇಷ ನಿರಂತರ ಮಹಾ|
ಪ್ರವಹವಂದದಿ ಕೊಡಲಿ ಭಗವದ್ಭಕ್ತ ಸಂತತಿಗೆ (ಹ.ಸಾ. 32-20)

ಶ್ರೀ ಪ್ರವಾಹ ವಾಯವೇ ನಮಃ. ತವ ಸುಪ್ರಭಾತಮ್.

ಶ್ರೀ ಪ್ರವಾಹ ವಾಯುದೇವರೇ, ನಿಮಗೆ ಅನಂತ ಪ್ರಣಾಮಗಳು. ನಿಮಗೆ ಸುಪ್ರಭಾತವಾಗಲಿ.

## 10 ನೇ ಕಕ್ಷ - ಶಚೀದೇವಿ, ರತೀದೇವಿ, ಸ್ವಾಯಂಭುವ ಮನು, ದಕ್ಷಪ್ರಜೇಶ್ವರ,
### ಬೃಹಸ್ಪತ್ಯಾಚಾರ್ಯರು ಮತ್ತು ಕಾಮಪುತ್ರ ಅನಿರುದ್ಧ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ವೈಕಾರಿಕ ರುದ್ರದೇವರಿಂದ ಜನಿಸಿಬಂದ ಇವರ ಶರೀರವು "ರಜಃ ಸತ್ತ್ವ ತಮೋ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ದಕ್ಷಿಣಬಹುವಿನಿಂದ ಶಚೀದೇವಿಯರು, ವಾಮಬಾಹುವಿನಿಂದ ರತೀದೇವಿಯರು, ದಕ್ಷಿಣಾಂಗುಷ್ಠದಿಂದ ದಕ್ಷ ಪ್ರಜೇಶ್ವರರು, ಸ್ಪರ್ಶಜ್ಞಾನ

ದಿಂದ ಬೃಹಸ್ಪತ್ಯಾಚಾರ್ಯರು, ಮಧ್ಯಮಾಂಗಲಿ ಪರ್ವದಿಂದ ಕಾಮಪುತ್ರ ಅನಿರುದ್ಧದೇವರು ಹುಟ್ಟಿದರು. ಇಂದ್ರನು ಹುಟ್ಟಿದ 10 ವರ್ಷಗಳ ಮೇಲೆ ಶಚೀದೇವಿಯರು, ಕಾಮನು ಹುಟ್ಟಿದ 10 ವರ್ಷಗಳ ನಂತರ ರತೀದೇವಿಯರು, ಬೃಹಸ್ಪತ್ಯಾಚಾರ್ಯರು ಹುಟ್ಟಿದ 5 ವರ್ಷಗಳಮೇಲೆ ಸ್ವಾಯಂಭುವ ಮನುವು, ಶತರೂಪಾದೇವಿಯರು ಹುಟ್ಟಿದ 20 ವರ್ಷಗಳನಂತರ ದಕ್ಷಪ್ರಜೇಶ್ವರರು, ಅಹಂಕಾರಿಕ ಪ್ರಾಣಹುಟ್ಟಿದ 25 ವರ್ಷಗಳ ನಂತರ ಬೃಹಸ್ಪತ್ಯಾಚಾರ್ಯರು, ದಕ್ಷಪ್ರಜಾಪತಿ ಹುಟ್ಟಿದ 25 ವರ್ಷಗಳ ನಂತರ ಅನಿರುದ್ಧರು ಹುಟ್ಟಿದರು. ತಾರತಮ್ಯದಲ್ಲಿ ಅಹಂಕಾರಿಕ ಪ್ರಾಣನಿಂದ 10 ಗುಣಗಳು ಕಡಿಮೆ ಎನಿಸಿಕೊಂಡು ಎಲ್ಲರು 10 ನೇ ಕಕ್ಷದಲ್ಲಿರುವರು. ಎಲ್ಲರಿಗು 16 ಬ್ರಹ್ಮಕಲ್ಪಗಳ ಸಾಧನೆ. ಶಚೀದೇವಿಯರು ಹಿಂದಿನ 6ನೇ ಮನ್ವಂತರದಲ್ಲಿ ಇಂದ್ರನೆನಿಸಿದ ಮಂದರದ್ಯುಮ್ನನ ಮಡದಿ "ಪ್ರಲೋಮಜೆ" ಯಾಗಿದ್ದರು. ತ್ರೇತಾಯುಗದಲ್ಲಿ ವಸುಮತಿ ಎಂಬ ಇಕ್ಷ್ವಾಕು ರಾಜನ ಮಗನಾದ ವಿಕುಕ್ಷಿಗೆ ಹೆಂಡತಿಯಾಗಿಯು, ಗಾಧಿರಾಜನ ಹೆಂಡತಿ "ಕೌಶಿಕೆ" ಯಾಗಿಯು ವಾಲಿಪತ್ನಿ "ತಾರೆ"ಯಾಗಿಯು, ರಾಮಪುತ್ರ ಕುಶನ ಹೆಂಡತಿ "ಕಾಂತಿಮತಿ" ಯಾಗಿಯು ಅವತರಿಸಿದರು. ದ್ವಾಪರಯುಗದಲ್ಲಿ "ಚಿತ್ರಾಂಗದೆ" ಎಂಬ ಹೆಸರಿನಿಂದ ಹುಟ್ಟಿಬಂದು ಅರ್ಜುನನಿಗೆ ಮಡದಿಯಾದರು. ರತೀದೇವಿಯರು ಎಲ್ಲ ರುಚಿಕರವಾದ ರಸಗಳಿಗೆ ಅಭಿಮಾನಿಯಾಗಿರುವರು. ದ್ವಾಪರಯುಗದಲ್ಲಿ "ಲಕ್ಷಣಾ" ಎಂಬ ಹೆಸರಿನಿಂದ ದುರ್ಯೋಧನನಿಗೆ ಪುತ್ರಿಯಾಗಿಯು, "ರುಕ್ಮವತಿ" ಎಂಬ ಹೆಸರಿನಿಂದ ರುಕ್ಮಿಣಿಗೆ ಮಗಳಾಗಿಯೂ ಅವತರಿಸಿದರು. ಸ್ವಾಯಂಭುವಮನುಗಳು ಉಪಸ್ಥ ತತ್ತ್ವಕ್ಕೆ ಅಭಿಮಾನಿಗಳಾಗಿ ಆ ತತ್ತ್ವಕ್ಕೆ ನಿಯಾಮಕನಾದ ಹರಿಣೀಪತಿ ವಾಸುದೇವನನ್ನು ಉಪಾಸಿಸುತ್ತಾರೆ. ಉದ್ದಿನದೋಸೆಗಳಿಂದ ಮಾಡಿದ ಪದಾರ್ಥಗಳಿಗೂ ಅಭಿಮಾನಿಯಾಗಿರುವರು. ಇವರ ಅನುಗ್ರಹದಿಂದ ಜೀವಿಯು ಜಿತೇಂದ್ರಿಯನಾಗಿ ಉರ್ಧ್ವರೇತಸ್ಕನಾಗುತ್ತಾನೆ. ದಕ್ಷಪ್ರಜಾಪತಿಗಳು ಪಾಣಿತತ್ತ್ವಕ್ಕೆ ಅಭಿಮಾನಿಗಳಾಗಿ ಯಜ್ಞಾಪತಿ ಪದ್ಮನಾಭನನ್ನು ಉಪಾಸಿಸುವರು. ಇವರು ಕುಂಬಳಕಾಯಿ - ಎಳ್ಳು - ಉದ್ದುಗಳಿಂದ ಮಾಡಿದ ಪದಾರ್ಥಗಳಿಗೂ ಅಭಿಮಾನಿಯಾಗಿರುವರು. ಬೃಹಸ್ಪತ್ಯಾಚಾರ್ಯರು ಶಬ್ದತತ್ತ್ವಕ್ಕೆ ಅಭಿಮಾನಿಗಳಾಗಿ ಸತ್ಯಾಪತಿಯಾದ ಪ್ರದ್ಯುಮ್ನನನ್ನು ಉಪಾಸಿಸುವರು. ಇವರು ತ್ರೇತಾಯುಗದಲ್ಲಿ ತಾರನಾಮಕ ಕಪಿಯಾಗಿ ಅವತರಿಸಿ ರಾಮನ ಸೇವೆಗೈದರು. ದ್ವಾಪರಯುಗದಲ್ಲಿ ವಾಯು ಆವೇಶದಿಂದ ಕೂಡಿದ ಉದ್ಧವನಾಗಿಯೂ, ಬ್ರಹ್ಮನ ಆವೇಶದಿಂದ ಕೂಡಿದ ದ್ರೋಣಾಚಾರ್ಯನಾಗಿಯೂ ಅವತರಿಸಿದರು.

ಕಾಮಪುತ್ರ ಅನಿರುದ್ಧನು ತ್ರೇತಾಯುಗದಲ್ಲಿ ಶತ್ರುಘ್ನನಾಗಿಯೂ, ದ್ವಾಪಯುಗದಲ್ಲಿ ಕೃಷ್ಣನ ಮೊಮ್ಮಗನೆಂದೆನಿಸಿದ ಅನಿರುದ್ಧನಾಗಿಯೂ ಅವತರಿಸಿದನು.

ವಿತತ ಮಹಿಮನ ವಿಶ್ವತೋಮುಖ - ನತುಲ ಭುಜಬಲ ಕಲ್ಪತರುವಾ|
ಶ್ರಿತರೆನಿಸಿ ಸಕಲೇಷ್ಟ ಪಡೆದನುದಿನದಿ ಮೋದಿಸುವ
ರತಿಸ್ವಯಂಭುವ ದಕ್ಷ ವಾಚ| ಸ್ಪತಿ ಬಿಡೌಜನ ಮಡದಿ ಶಚಿ ಮ
ನ್ಮಥ ಕುಮಾರನಿರುದ್ಧರೆಮಗೀಯಲಿ ಸುಮಂಗಳವ (ಹ.ಸಾ. 32-19)

ಶಚಿ - ರತಿ ಸ್ವಾಯಂಭುವ ಮನು - ದಕ್ಷಪ್ರಜಾಪತಿ - ಬೃಹಸ್ಪತಿ - ಅನಿರುದ್ಧೇಭ್ಯೋ ನಮಃ - ವಃ ಸುಪ್ರಭಾತಂ || ಶಚೀ - ರತೀ - ಸ್ವಾಯಂಭುವಮನು - ದಕ್ಷಪ್ರಜೇಶ್ವರ - ಬೃಹಸ್ಪತಿ - ಅನಿರುದ್ಧರೇ ! ನಿಮಗೆ ಅನಂತನಮನಗಳು. ನಿಮಗೆ ಸುಪ್ರಭಾತವಾಗಲಿ.

## 9 ನೇ ಕಕ್ಷ - ಅಹಂಕಾರಿಕಪ್ರಾಣ

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ವೈಕಾರಿಕ ರುದ್ರದೇವ ರಿಂದ ಜನಿಸಿಬಂದ ಇವರ ಶರೀರವು "ರಜಃ ಸತ್ವ ರಜೋ" ಗುಣಾತ್ಮಕವಾದುದು. ಪದ್ಮ ಕಲ್ಪದಲ್ಲಿ ವಿರಾಡ್ರೂಪಿ ಪರಮಾತ್ಮನ ಅನಾಮಿಕ ಬೆರಳಿನಿಂದ ಜನಿಸಿ ಬಂದ ಇವರು ಕಾಮ ಹುಟ್ಟಿದ ಹತ್ತು ವರ್ಷಗಳ ಮೇಲೆ ಜನಿಸಿದರು. ತಾರತಮ್ಯದಲ್ಲಿ ಇಂದ್ರದೇವರಿ ಗಿಂತ 10 ಗುಣಗಳಿಂದ ಕಡಿಮೆ ಯೆಂದೆನಿಸಿಕೊಂಡು, 9 ನೇ ಕಕ್ಷದಲ್ಲಿರುವರು. ಇವರಿಗೆ 18 ಬ್ರಹ್ಮಕಲ್ಪಗಳ ಸಾಧನೆ. ತ್ವಕ್ ತತ್ವಕ್ಕೆ ಅಭಿಮಾನಿಯಾಗಿ ಕಮಲಾಲಯಾಪತಿ ಮಧು ಸೂಧನನನ್ನು ಉಪಾಸಿಸುವರು. ಇವರ ಶರೀರವು 24 ಲಕ್ಷಣಗಳಿಂದ ಯುಕ್ತವಾಗಿದೆ. ಸರ್ವೋತ್ತುಂಗ ಎಂಬ ಹೆಸರಿನಿಂದ ಒಮ್ಮೆ ಹುಟ್ಟಿಬಂದರು. ಇವರ ಅನುಗ್ರಹದಿಂದ ಶರೀರಾಭಿಮಾನವು ದೂರಾಗುವುದು.

ಚಾರುತರ ನವವಿಧ ಭಕುತಿ ಗಂ| ಭೀರ ವಾರಾಶಿಯೊಳು ಪರಮೋ
ದಾರ ಮಹಿಮನ ಹೃದಯ ಫಣಿಪತಿ ಪೀಠದೊಳು ಭಜಿಪ
ಭೂರಿ ಕರ್ಮಾ ಕರನೆನಿಸುವ ಶ| ರೀರ ಮಾನಿ ಪ್ರಾಣಪತಿಪದ
ವಾರಿರುಹಕಾನಮಿಪೆ ಮದ್ಗುರುರಾಯ ನಹುದೆಂದು (ಹ. ಸಾ. 32-18)

ಅಹಂಕಾರಿಕ ಪ್ರಾಣಾಯ ನಮಃ. ತವ ಸುಪ್ರಭಾತಂ.

ಅಹಂಕಾರಿಕ ಪ್ರಾಣದೇವರೇ, ನಿಮಗೆ ಅನಂತ ಪ್ರಣಾಮಗಳು. ನಿಮಗೆ ಸುಪ್ರ ಭಾತವಾಗಲಿ.

## 8 ನೇ ಕಕ್ಷ - ಇಂದ್ರ - ಕಾಮರು

ಸೃಷ್ಟಿಯ ಆದಿಯಲ್ಲಿ ಬ್ರಹ್ಮಾಂಡದ ಬಹಿರಾವರಣದಲ್ಲಿ ವೈಕಾರಿಕ ರುದ್ರದೇ ವರಿಂದ ಜನಿಸಿಬಂದ ಇವರ ಶರೀರವು "ರಜಃ ಸತ್ವ ರಜೋ" ಗುಣಾತ್ಮಕವಾದುದು.

ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ವಾಯು ತತ್ತ್ವದಿಂದ ಇಂದ್ರದೇವರು, ವಾಮ ಬಾಹುವಿನಿಂದ ಕಾಮದೇವರು ಜನಿಸಿಬಂದರು. ಇಂದ್ರದೇವರು ಪಾರ್ವತಿ ಹುಟ್ಟಿದ 100 ವರ್ಷಗಳ ನಂತರವೂ, ಕಾಮದೇವರು ಇಂದ್ರನ ತರುವಾಯ 30 ವರ್ಷಗಳ ನಂತರ ಹುಟ್ಟಿಬಂದರು, ಇವರಿಬ್ಬರು ತಾರತಮ್ಯದಲ್ಲಿ ಪಾರ್ವತೀದೇವಿಯರಿಂದ 10 ಗುಣಗಳಿಂದ ಕಡಿಮೆಯೆನಿಸಿಕೊಂಡು 8ನೇ ಕಕ್ಷದಲ್ಲಿ ಇರುವರು. ಇವರಿಗೆ 20 ಬ್ರಹ್ಮಕಲ್ಪಗಳ ಸಾಧನೆ. ಇವರ ಶರೀರವು 25 ಲಕ್ಷಣಗಳಿಂದ ಕೂಡಿದುದಾಗಿದೆ. ಇಂದ್ರದೇವರು ಮನಸ್ತತ್ತ್ವಕ್ಕೆ ಅಭಿಮಾನಿಯಾಗಿ ಪದ್ಮಾವತೀ ಪತಿ ಗೋವಿಂದನನ್ನು ಉಪಾಸಿಸುವರು. ಬೆಲ್ಲ ಸಕ್ಕರೆಗಳಿಗೆ ಅಭಿಮಾನಿಯಾಗಿರುವರು. ಪ್ರಸ್ತುತ ನಡೆಯುತ್ತಿರುವ ಈ ವೈವಶ್ವತ ಮನ್ವಂತರದಲ್ಲಿ ಪುರಂದರ ಎಂಬ ಹೆಸರಿನಿಂದ ಇಂದ್ರಪದವಿಯನ್ನು ಆಳುತ್ತಿರುವರು. ಇವರೇ ಹಿಂದಿನ 6ನೇ ಮನ್ವಂತರದಲ್ಲಿ ಮಂದ್ರದ್ಯುಮ್ನ ಎಂಬ ಹೆಸರಿನಿಂದ ದೇವೇಂದ್ರ ಪದವಿಯನ್ನು ಆಳಿದರು.

ತ್ರೇತಾಯುಗದಲ್ಲಿ ವಿಕುಕ್ಷಿಯೆಂಬ ಹೆಸರಿನಿಂದ ಇಕ್ಷ್ವಾಕುರಾಜನಿಗೆ ಮಗನಾಗಿಯೂ, ವಿಶ್ವಾಮಿತ್ರನ ತಂದೆ ಗಾಧಿರಾಜನಾಗಿಯೂ, ವಾಲಿಯಾಗಿಯೂ, ರಾಮಚಂದ್ರನ ಮಗನಾದ ಕುಶನಾಗಿಯೂ ಅವತರಿಸಿದರು. ದ್ವಾಪರದಲ್ಲಿ ಹರಿ - ವಾಯು - ಶೇಷದೇವರ ಆವೇಶದಿಂದ ಕೂಡಿದ ಅರ್ಜುನನಾಗಿ ಅವತರಿಸಿದರು.

ಕಾಮದೇವರು ಸಹ ಮನಸ್ತತ್ತ್ವಕ್ಕೆ ಅಭಿಮಾನಿಯಾಗಿ ಪದ್ಮಾವತೀ ಪತಿ ಗೋವಿಂದನನ್ನು ಉಪಾಸಿಸುವರು. ಇವರು ಶ್ರೀಹರಿಯ ಸುದರ್ಶನ ಚಕ್ರಕ್ಕೂ, ಸಾಸುವೆ, ಇಂಗು, ಯಾಲಕ್ಕಿ, ಕರ್ಪೂರ ಮತ್ತು ಅಡಿಗೆ ಮಾಡಲು ಉಪಯೋಗಿಸುವ ಕಟ್ಟಿಗೆ ಕುರುಳು ಮುಂತಾದವುಗಳಿಗೆ ಅಭಿಮಾನಿಯಾಗಿರುವರು.

ಮೊಟ್ಟಮೊದಲು ಸನತ್ಕುಮಾರನಾಗಿ ಅವತರಿಸಿ, ನಂತರ ಉಮಾಪುತ್ರನಾದ ಷಣ್ಮುಖನಾಗಿ ಜನಿಸಿಬಂದು ದೇವಸೇನಾನಿ ಎನಿಸಿಕೊಂಡರು. ಇವರು ತ್ರೇತಾಯುಗದಲ್ಲಿ ರಾಮಚಂದ್ರನ ತಮ್ಮ ಭರತನಾಗಿಯೂ, ದ್ವಾಪರದಲ್ಲಿ ಪ್ರದ್ಯುಮ್ನ ಎಂಬ ಹೆಸರಿನಿಂದ ರುಕ್ಮಿಣಿಗೆ ಮಗನಾಗಿಯೂ, ಸಾಂಬನೆಂಬ ಹೆಸರಿನಿಂದ ಜಾಂಬವತಿಗೆ ಮಗನಾಗಿಯೂ ಅವತರಿಸಿದರು.

ತ್ರಿದಿವ ತರುಮಣಿಧೇನುಗಳಿಗಾ| ಸ್ಪದವೆನಿಪ ತ್ರಿದಶಾಲಯಾಬ್ಧಿಗೆ
ಬದರನಂದದಲೊಪ್ಪುತಿಪ್ಪ ಉಪೇಂದ್ರ ಚಂದ್ರಮನ
ಮೃದು ಮಧುರ ಸುಸ್ತವನದಿಂದಲಿ| ಮಧುಸಮಯ ಪಿಕನಂತೆ ಪಾಡುವ
ಮುದಿರವಾಹನ ನಂಘ್ರಿಗಯುಗ್ಮಂಗಳಿಗೆ ನಮಿಸುವೆನು ಹ.ಸಾ. 32-16

ಕೃತಿರಮಣ ಪ್ರದ್ಯುಮ್ನದೇವನ| ಅತುಳ ಬಲ ಲಾವಣ್ಯಗುಣ ಸಂ-
ತತ ಉಪಾಸನ ಕೇತುಮಾಲಾ ಖಂಡದೊಳು ರಚಿಪ
ರತಿ ಮನೋಹರ ನಂಘ್ರಿ ಕಮಲಕೆ| ನತಿಸುವೆನು ಭಕುತಿಯಲಿ ಮಮದು
ರ್ಮತಿ ಕಳೆದು ಸನ್ಮತಿಯ ನೀಯಲಜಸ್ರನಮಗೊಲಿದು (ಹ.ಸಾ. 32-17)
ಇಂದ್ರಕಾಮಾಭ್ಯಾಂ ನಮಃ. ಯುವಯೋಃ ಸುಪ್ರಭಾತಂ.
ಇಂದ್ರಕಾಮರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 7 ನೇ ಕಕ್ಷ - ಸೌಪರ್ಣಿ - ವಾರುಣಿ - ಪಾರ್ವತಿ

ಸೌಪರ್ಣಿ :- ಸೃಷ್ಟಿಯ ಆದಿಯಲ್ಲಿ ಬಲಾಖ್ಯ ವಾಯುದೇವರಿಂದ ಜನಿಸಿಬಂದ ಇವರ ಶರೀರವು "ಸತ್ವ ತಮೋ ರಜೋ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿಯಾದ ಭಗವಂತನ ವಾಮಪಾದದಿಂದ ಜನಿಸಿಬಂದ ಇವರು ಶೇಷದೇವರು ಜನಿಸಿದ 10 ವರ್ಷಗಳ ನಂತರ ಹುಟ್ಟಿದರು.

ತಾರತಮ್ಯದಲ್ಲಿ ಷಣ್ಮಹಿಷಿಯರಿಗಿಂತ 3 ಗುಣಗಳಿಂದ ಕಡಿಮೆಯೆನಿಸಿಕೊಂಡು 7 ನೇ ಕಕ್ಷದಲ್ಲಿರುವರು. ಇವರಿಗೆ 100 ಬ್ರಹ್ಮಕಲ್ಪಗಳ ಸಾಧನೆ. ಇವರದೇಹವು 26 ಲಕ್ಷಣಗಳಿಂದ ಕೂಡಿರುತ್ತದೆ. ಬುದ್ಧಿ ತತ್ವಕ್ಕೆ ಅಭಿಮಾನಿಯಾಗಿ ಪದ್ಮಾವತೀ ಪತಿಯಾದ ಗೋವಿಂದನನ್ನು ಉಪಾಸಿಸುವರು. ಇವರಿಗೆ ಅವತಾರಗಳಿಲ್ಲ.

ವಾರುಣಿ :- ಸೃಷ್ಟಿಯ ಆದಿಯಲ್ಲಿ ವಿರಿಂಚಿನಾಮಕ ಬ್ರಹ್ಮನಿಂದ ಜನಿಸಿಬಂದ ಇವರ ಶರೀರವು "ಸತ್ವ ತಮೋ ರಜೋ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿಯಾದ ಭಗವಂತನ ವಾಮಪಾದದಿಂದ ಜನಿಸಿಬಂದ ಇವರು ಶೇಷದೇವರು ಜನಿಸಿದ 10 ವರ್ಷಗಳ ನಂತರ ಹುಟ್ಟಿ ಬಂದರು. ತಾರತಮ್ಯದಲ್ಲಿ ಷಣ್ಮಹಿಷಿಯರಿಗಿಂತ 2 ಗುಣಗಳಿಂದ ಕಡಿಮೆಯೆನಿಸಿಕೊಂಡು 7 ನೇ ಕಕ್ಷದಲ್ಲಿರುವರು. ಇವರಿಗೆ 100 ಬ್ರಹ್ಮಕಲ್ಪಗಳ ಸಾಧನೆ. ಇವರದೇಹವು 26 ಲಕ್ಷಣಗಳಿಂದ ಕೂಡಿರುತ್ತದೆ. ಬುದ್ಧಿ ತತ್ವಕ್ಕೆ ಅಭಿಮಾನಿಯಾದ ಇವರು ಪದ್ಮಾವತೀ ಪತಿಯಾದ ಗೋವಿಂದನನ್ನು ಉಪಾಸಿಸುವರು.

ತ್ರೇತಾಯುಗದಲ್ಲಿ ಊರ್ಮಿಳೆ ಎಂಬ ಹೆಸರಿನಿಂದ ಲಕ್ಷ್ಮಣನಿಗೆ ಪತ್ನಿಯಾಗಿಯೂ, ದ್ವಾಪರದಲ್ಲಿ ಮಹಾಲಕ್ಷ್ಮೀ ಆವೇಶದಿಂದ ಕೂಡಿದ ಬಲರಾಮನ ಪತ್ನಿ ರೇವತಿಯಾಗಿಯೂ ಅವತರಿಸಿದರು.

ಪಾರ್ವತಿ :- ಸೃಷ್ಟಿಯ ಆದಿಯಲ್ಲಿ ವಿರಿಂಚಿನಾಮಕ ಬ್ರಹ್ಮನಿಂದ ಹುಟ್ಟಿಬಂದ ಇವರ ಶರೀರವು "ಸತ್ವ ತಮೋ ರಜೋ" ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾ

ದ್ರೂಪಿಯಾದ ಭಗವಂತನ ವಾಮಪಾದದಿಂದ ಜನಿಸಿಬಂದ ಇವರು ರುದ್ರದೇವರು ಜನಿಸಿದ 10 ವರ್ಷಗಳ ನಂತರ ಹುಟ್ಟಿದವರು.

ತಾರತಮ್ಯದಲ್ಲಿ ಷಣ್ಮಹಿಷಿಯರಿಗಿಂತ 2 ಗುಣಗಳಿಂದ ಕಡಿಮೆಯೆನಿಸಿಕೊಂಡು 7 ನೇ ಕಕ್ಷದಲ್ಲಿರುವರು. ಇವರಿಗೆ 100 ಬ್ರಹ್ಮಕಲ್ಪಗಳ ಸಾಧನೆ. ಇವರದೇಹವು 26 ಲಕ್ಷ ಣಗಳಿಂದ ಯುಕ್ತವಾಗಿದೆ. ಬುದ್ಧಿ ತತ್ತ್ವಕ್ಕೆ ಅಭಿಮಾನಿಯಾಗಿ ಪದ್ಮಾವತೀ ಪತಿ ಗೋವಿಂದನನ್ನು ಉಪಾಸಿಸುವರು. ಇವರು ಆದಿಯಲ್ಲಿ ದಕ್ಷಪ್ರಜಾಪತಿಯಿಂದ ಪೋಷಿತರಾಗಿ ದಾಕ್ಷಾಯಣೀ ಎಂದೆನಿಸಿಕೊಂಡು, ಕಾಲಾಂತರದಲ್ಲಿ ಹಿಮವತ್ಪುತ್ರಿಯಾಗಿ ಪಾರ್ವತೀ ಎಂದು ಪ್ರಸಿದ್ಧರಾದರು. ಇವರು ಹುಳಿಪದಾರ್ಥಗಳಿಗೆ ಅಭಿಮಾನಿಯಾಗಿರುವರು. ಚಂಡಿ - ಕಾತ್ಯಾಯನಿ - ಉಮಾ ಇವು ಇವರ ನಾಮಾಂತರಗಳು.

ಆ ಪರಂತಪನೊಲಿಮೆಯಿಂದ ಸದಾಪರೋಕ್ಷಿಗಳೆನಿಸಿ ಭಗವ
ದ್ರೂಪ ಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ
ಸೌಪರಣಿ ವಾರುಣಿ ನಗಾತ್ಮಜ ರಾಪನಿತು ಬಣ್ಣಿಸುವೆನೆನ್ನ ಮ
ಹಾಪರಾಧಗಳೆಣಿಸದೀಯಲಿ ಪರಮ ಮಂಗಳವ (ಹ.ಸಾ. 32-15)

ಸೌಪರ್ಣೀ - ವಾರುಣೀ - ಪಾರ್ವತೀಭ್ಯಃ ನಮಃ. ವಃ ಸುಪ್ರಭಾತಂ.

ಸೌಪರ್ಣೀ - ವಾರುಣಿ - ಪಾರ್ವತೀದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## ತುಲಸೀದೇವಿ

ತುಲಸೀದೇವಿಯು ಸಮುದ್ರಮಥನಕಾಲದಲ್ಲಿ ಧನ್ವಂತ್ರೀನಾಮಕ ಪರಮಾತ್ಮನ ಆನಂದಾಶ್ರುಗಳಿಂದ ಜನ್ಮತಾಳಿದಳು. "ತುಲಸ್ಯಾಂತು ರಮಾದೇವೀ ಸಾವಿಷ್ಣೋಃ ನಿತ್ಯದಾ ಪ್ರಿಯಾ" ಎಂಬ ವಚನದಂತೆ ತುಳಸಿಯಲ್ಲಿ ರಮಾದೇವಿಯ ನಿತ್ಯ ಸನ್ನಿಧಾನವಿರುವುದು. ತುಲಸಿಯ ವೃಕ್ಷಮೂಲದಲ್ಲಿ ಸರ್ವತೀರ್ಥಗಳು, ಮಧ್ಯದಲ್ಲಿ ಸಕಲ ದೇವತೆಗಳು, ಮೇಲ್ಭಾಗದಲ್ಲಿ ಸಕಲವೇದಗಳು ಸನ್ನಿಹಿತವಾಗಿರುವವು. ತುಲಸಿಯನ್ನ ನೋಡಿದಾಕ್ಷಣ ಸಕಲ ಪಾಪಗಳು ಹಿಂಗುವವು; ಸ್ಪರ್ಶಮಾತ್ರದಿಂದ ದೇಹವು ಪವಿತ್ರವಾಗುವುದು; ನಮಸ್ಕಾರಮಾತ್ರದಿಂದ ಎಲ್ಲ ರೋಗಗಳು ಪರಿಹೃತವಾಗುವವು; ನೀರೆರೆದರೆ ಯಮದೂತರ ಭಯವಿರುವುದಿಲ್ಲ. ಭಗವಂತನ ಪಾದಗಳಿಗೆ ತುಲಸಿಯನ್ನು ಅರ್ಪಿಸಿದರೆ ಮೋಕ್ಷವು ತಾನಾಗಿಯೇ ಕೈಗೂಡುವುದು.

ತುಲಸ್ಯೈ ನಮಃ ತವ ಸುಪ್ರಭಾತಮ್.

ತುಲಸೀದೇವಿಯೇ, ನಿನಗೆ ಅನಂತ ನಮನಗಳು. ನಿನಗೆ ಸುಪ್ರಭಾತವಾಗಲಿ.

ಉದಯರಾಗ

ಏಳಮ್ಮ ತುಳಸೀ ಕೋಮಲವಾಣಿ ನೀಲವರ್ಣನ ರಾಣಿ ನಿತ್ಯಕಲ್ಯಾಣಿ || ಪ ||

ಉಟ್ಟ ಪೀತಾಂಬರ ಹೃದಯದಿ ಕೌಸ್ತುಭ
ಇಟ್ಟ ದ್ವಾದಶನಾಮ ನೊಸಲಲ್ಲಿ ತಿಲಕ
ತೊಟ್ಟ ಮುತ್ತಿನ ಅಂಗಿ ತೋಳ ಬಾಪುರಿಯಿಂದ
ಲಕ್ಷ್ಮಿರಮಣ ನಿನ್ನಪ್ಪದನಲ್ಲೆ ತುಳಸೀ || ೧ ||

ಬಲದಕೈಯ್ಯಲಿ ಚಕ್ರ ಎಡದ ಕೈಯ್ಯಲಿ ಶಂಖ
ಕೊರಳೊಳಘಾಕಿದ್ದ ಶ್ರೀವತ್ಸಲಾಂಛನ
ಉರಗಶಯನನ ಮೇಲೆ ಮಲಗಿದ್ದ ಪರಮಾತ್ಮ
ಕೊರಳೊಳು ಧರಿಸಿ ಕೊಂಡಿಹನಲ್ಲೆ ತುಳಸೀ || ೨ ||

ಬೃಂದಾವನದಲ್ಲಿ ಛಂದುಳ್ಳ ಬನದಲ್ಲಿ
ಮಂದಗಮನೆಯರ ಮ್ಯಾಳದಲ್ಲಿ
ನಂದಗೋಪನ ಕಂದ ಬಾಯ ತಾಂಬೂಲದಲ್ಲಿ ಆ-
ನಂದದಿಂದಲಿ ನಿನ್ನಪ್ಪಿದನಲ್ಲೆ ತುಳಸೀ || ೩ ||

ಎಳೆಯ ದೆಳದಿಂಗಳಿಂದ ಕೊಳಲನಾದಗಳಿಂದ
ಎಡಬಲದಲೊಪ್ಪುವ ಛತ್ರಚಾಮರಗಳಿಂದ
ಕಡಗ ಕಂಕಣದಿಂದ ಮುಡಿದ ಮಲ್ಲಿಗೆಯಿಂದ
ಮುರಹರಮೂರ್ತಿ ನಿನ್ನಪ್ಪಿದನಲ್ಲೆ ತುಳಸೀ || ೪ ||

ಕಾಲಲಂದುಗೆಯಿಂದ ಕಸ್ತೂರಿ ನಾಮಗಳಿಂದ
ಬಾಲಗೋಪಾಲರಿಂದ ಭಕ್ತವತ್ಸಲನು
ವೇಣುನಾದವು ಮಾಡಿ ಪ್ರಾಣಪತಿಯು ಲಕ್ಷ್ಮೀ
ಪುರಂದರವಿಠಲ ನಿನ್ನಪ್ಪಿದನಲ್ಲೆ ತುಳಸೀ || ೫ ||

## 6 ನೇ ಕಕ್ಷ - ಜಾಂಬವತಿ - ಕಾಳಿಂದಿ - ನೀಲಾ - ಭದ್ರಾ - ಮಿತ್ರವಿಂದ ಮತ್ತು ಲಕ್ಷಣಾದೇವಿಯರು

ಇವರು ಸತ್ವ - ತಮೋ - ರಜೋ ಗುಣಾತ್ಮಕವಾದ ಶರೀರವುಳ್ಳವರು. ತಾರ ತಮ್ಯದಲ್ಲಿ ಮಹಾರುದ್ರದೇವರಿಂದ 5 ಗುಣಗಳಿಂದ ಕಡಿಮೆಯೆನಿಸಿಕೊಂಡು, 6ನೇ

ಕಕ್ಷದಲ್ಲಿರುವರು. ಇವರೆಲ್ಲರಿಗೂ 100 ಬ್ರಹ್ಮಕಲ್ಪಗಳ ಸಾಧನೆ. ಅಹಂಕಾರ ತತ್ತ್ವದಲ್ಲಿ ವಾಸಿಸುವ ಇವರು ನಾಭಿಯಲ್ಲಿರುವ 6 ದಳ ಕಮಲದಲ್ಲಿರುವರು. ಇವರ ದೇಹಗಳು 27 ಲಕ್ಷಣಗಳಿಂದ ಯುಕ್ತವಾಗಿವೆ.

ಜಾಂಬವತಿ :- ಪೂರ್ವಸರ್ಗದಲ್ಲಿ ಸೋಮನ ಪುತ್ರಿಯಾಗಿ ಅವತರಿಸಿದ ಇವರು, ಬಾಲ್ಯದಲ್ಲೆ ಮಹಾ ವೈರಾಗ್ಯಶಾಲಿಯಾಗಿ ಸರ್ವೇಂದ್ರಿಯಗಳಿಂದ ಆಗುವ ಸಕಲ ಕರ್ಮ ಗಳನ್ನು ಶ್ರೀಹರಿಗೆ ಸಮರ್ಪಿಸಿದ ಮಹಾನ್ ವ್ಯಕ್ತಿ ಇವರು. ಇವರ ಗುರುಗಳು ಜೈಗೀ ಷವ್ಯರು. ಗುರು ಉಪದೇಶದಂತೆ ಶೇಷಾಚಲವನ್ನು ಸೇರಿ ಶ್ರೀನಿವಾಸನನ್ನು ಕುರಿತು ತಪಸ್ಸು ಮಾಡಿ ಆತನನ್ನೇ ಪತಿಯನ್ನಾಗಿ ಅಪೇಕ್ಷಿಸಿದರು. ಮುಂದೆ ದ್ವಾಪರ ಯುಗದಲ್ಲಿ ಶ್ರೀಕೃಷ್ಣನಿಗೆ ಪತ್ನಿಯಾದರು. ಇವರಲ್ಲಿ ರಮಾದೇವಿಯ ವಿಶೇಷ ಸನ್ನಿಧಾನವಿರುವುದು.

ಕಾಳಿಂದಿ :- ಇವರು ವಿವಸ್ವನ್ನಾಮಕ ಸೂರ್ಯನ ಪುತ್ರಿ. ಯಮುನಾದೇವಿಯ ತಂಗಿ. ಶ್ರೀಕೃಷ್ಣನನ್ನೇ ಪತಿಯನ್ನಾಗಿ ಅಪೇಕ್ಷಿಸಿ ಯಮುನಾ ತೀರದಲ್ಲಿ ತಪಸ್ಸು ಮಾಡಿ ಶ್ರೀಕೃಷ್ಣನನ್ನು ಒಲಿಸಿ ಆತನಿಗೆ ಪತ್ನಿಯಾದರು.

ನೀಲಾ :- ಪೂರ್ವಕಲ್ಪದಲ್ಲಿ ಕವ್ಯವಾಹನನೆಂಬ ಅಗ್ನಿಯ ಪುತ್ರಿ ಎನಿಸಿದ ಇವರು ಶ್ರೀಹರಿಯನ್ನೇ ಪತಿಯನ್ನಾಗಿ ಅಪೇಕ್ಷಿಸಿ ತಪಸ್ಸು ಮಾಡಿ, ದ್ವಾಪರಯುಗದಲ್ಲಿ ಕೋಸ ಲಾಧಿಪತಿ ನಗ್ನಿಜಿತ್ ರಾಯನ ಮಗಳಾಗಿ ಜನಿಸಿ ಶ್ರೀಕೃಷ್ಣನನ್ನು ಮದುವೆಯಾದರು.

ಭದ್ರಾ :- ಪೂರ್ವ ಸರ್ಗದಲ್ಲಿ ನಳನ ಮಗಳಾಗಿ ಜನಿಸಿ, ಶ್ರೀಹರಿಯನ್ನೇ ಪತಿ ಯನ್ನಾಗಿ ಅಪೇಕ್ಷಿಸಿ ತಪಸ್ಸು ಮಾಡಿ, ಮುಂದೆ ದ್ವಾಪರಯುಗದಲ್ಲಿ ವಸುದೇವನ ತಂಗಿ ಶೃತಿಕೀರ್ತಿಗೆ ಮಗಳಾಗಿ ಹುಟ್ಟಿ ಬಂದು ಶ್ರೀಕೃಷ್ಣನಿಗೆ ಪತ್ನಿಯಾದರು.

ಮಿತ್ರವಿಂದ :- ಪೂರ್ವಸರ್ಗದಲ್ಲಿ ಅಗ್ನಿಷ್ವಾತ್ತನೆಂಬ ಪಿತೃವಿನ ಮಗಳಾಗಿ ಜನಿಸಿ, ಶ್ರೀಹರಿಯನ್ನೇ ಪತಿಯನ್ನಾಗಿ ಅಪೇಕ್ಷಿಸಿ ತಪಸ್ಸು ಮಾಡಿ, ಮುಂದೆ ದ್ವಾಪರಯುಗದಲ್ಲಿ ಶ್ರೀಕೃಷ್ಣನ ಸೋದರತ್ತೆಯಾದ ರಾಜಾಧಿದೇವಿಗೆ ಮಗಳಾಗಿ ಜನಿಸಿ ಬಂದು ಶ್ರೀಕೃಷ್ಣನನ್ನು ಮದುವೆಯಾದರು.

ಲಕ್ಷಣಾ :- ಪೂರ್ವಸರ್ಗದಲ್ಲಿ ಬರ್ಹಿಷ್ಮತು ರಾಜನ ಮಗಳಾಗಿ ಜನಿಸಿ, ಶ್ರೀಹ ರಿಯನ್ನೆ ಪತಿಯನ್ನಾಗಿ ಅಪೇಕ್ಷಿಸಿ ಸರ್ವತ್ರ ಭಗವಂತನನ್ನು ಉಪಾಸಿಸುತ್ತಾ ತಪಸ್ಸು ಮಾಡಿದರು. ದ್ವಾಪರಯುಗದಲ್ಲಿ ಮದ್ರರಾಜನ ಪುತ್ರಿಯಾಗಿ ಅವತರಿಸಿ ಶ್ರೀಕೃಷ್ಣನನ್ನು ಪತಿಯನ್ನಾಗಿ ಪಡೆದರು.

ಕಂಬುಪಾಣಿಯ ಪರಮ ಪ್ರೇಮ ನಿ-ತಂಬಿನಿಯರೆಂದೆನಿಪ ಲಕ್ಷಣೆ
ಜಾಂಬವತಿ ಕಾಳಿಂದಿ ನೀಲಾ ಭದ್ರ ಸಖಿವಿಂದ
ಎಂಬ ಷಣ್ಮಹಿಷಿಯರ ದಿವ್ಯ ಪದಾಂಬುಜಗಳಿಗೆ ನಮಿಪೆ ಮಮ ಹೃದ-
ಯಾಂಬರದಿ ನೆಲಿಸಲಿ ಬಿಡದೆ ತಮ್ಮರಸ ನೊಡಗೂಡಿ (ಹ.ಸಾ. 32-14)

ಜಾಂಬವತಿ - ಕಾಳಿಂದಿ - ನೀಲಾ - ಭದ್ರಾ - ಮಿತ್ರವಿಂದಾ - ಲಕ್ಷಣಾಭ್ಯಃ ನಮಃ ವಃ ಸುಪ್ರಭಾತಂ.

ಜಾಂಬವತಿ - ಕಾಳಿಂದಿ - ನೀಲಾ - ಭದ್ರಾ - ಮಿತ್ರವಿಂದಾ - ಲಕ್ಷಣಾದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 5 ನೇ ಕಕ್ಷ - ಗರುಡ - ಶೇಷ - ರುದ್ರ

ಗರುಡದೇವರು :- ಸೃಷ್ಟಿಯ ಆದಿಯಲ್ಲಿ ಬಲಾಖ್ಯವಾಯುದೇವರಿಂದ ಹುಟ್ಟಿ ಬಂದ ಇವರ ಶರೀರವು ಸತ್ತ್ವ - ತಮೋ - ರಜೋ ಗುಣಾತ್ಮಕವಾದುದು. ಪುನಃ ವಿರಾಡ್ರೂಪಿಯಾದ ಭಗವಂತನ ದಕ್ಷಿಣಪಾದದಿಂದ ಜನಿಸಿದ ಇವರು, ಶೇಷದೇವರು ಹುಟ್ಟಿದ ನಂತರ ಸಾವಿರವರ್ಷಗಳ ಮೇಲೆ ಜನಿಸಿದರು. ತಾರತಮ್ಯದಲ್ಲಿ ಸರಸ್ವತೀದೇವಿಯರಿಂದ 100 ಗುಣಗಳಿಂದ ಕಡಿಮೆ ಎನಿಸಿಕೊಂಡು, 5ನೇ ಕಕ್ಷದಲ್ಲಿರುವರು. ಇವರಿಗೆ 100 ಬ್ರಹ್ಮಕಲ್ಪಗಳ ಸಾಧನೆ. 28 ದೇಹಲಕ್ಷಣಗಳಿಂದ ಕೂಡಿದ ಇವರು, ಅಹಂಕಾರ ತತ್ತ್ವಕ್ಕೆ ಅಭಿಮಾನಿಯಾಗಿ, ಕಮಲಾಪತಿ ಮಾಧವನನ್ನು ಉಪಾಸಿಸುವರು. ಕಾಲಕ್ಕೂ ಚಿತ್ತಕ್ಕೂ ಆಹಾರಪದಾರ್ಥಗಳಲ್ಲಿ ಒಂದಾದ ತೊವ್ವೆಗೂ ಅಭಿಮಾನಿಯಾಗಿರುವರು. ಇವರಿಗೆ ಅವತಾರಗಳಿಲ್ಲ.

ಜಗದುದರನ ಸುರೋತ್ತಮನ ನಿಜ
ಪೆಗಲೊಳಾಂತು ಕರಾಬ್ಜದೋಳ್ ಪದ
ಯುಗ ಧರಿಸಿ ನಖಪಂಕ್ತಿಯೊಳು ರಮಣೀಯ ತರವಾದ
ನಗಧರನ ಪ್ರತಿಬಿಂಬ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ಖಗಕುಲಾಧಿಪ ಕೊಡಲಿ ಮಂಗಳ ಸಕಲ ಸುಜನರಿಗೆ

(ಹ.ಸಾ. 32-8)

ಗರುಡಾಯ ನಮಃ ತವ ಸುಪ್ರಭಾತಂ.

ಗರುಡದೇವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

ಶೇಷದೇವರು :- ಸೃಷ್ಟಿಯ ಆದಿಯಲ್ಲಿ ಬಲಾಖ್ಯವಾಯುದೇವರಿಂದ ಹುಟ್ಟಿ ಬಂದ ಇವರ ಶರೀರವು ಸತ್ತ್ವ - ತಮೋ - ರಜೋ ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿಯಾದ ಭಗವಂತನ ದಕ್ಷಿಣಪಾದದಿಂದ ಜನಿಸಿಬಂದ ಇವರು ಸರಸ್ವತಿ ಭಾರತಿಯರು ಜನಿಸಿದ 1000 ವರ್ಷಗಳ ನಂತರ ಹುಟ್ಟಿ ಬಂದರು. ತಾರತಮ್ಯದಲ್ಲಿ ಸರಸ್ವತಿ - ಭಾರತೀದೇವಿಯರಿಂದ 100 ಗುಣಗಳಿಂದ ಕಡಿಮೆ ಎನಿಸಿಕೊಂಡು 5ನೇ ಕಕ್ಷದಲ್ಲಿರುವರು. ಇವರ ಸಾಧನೆ 100 ಬ್ರಹ್ಮಕಲ್ಪಗಳು. ಅಹಂಕಾರ ತತ್ತ್ವಕ್ಕೂ ಜೀವಿಗಳಿಗೂ, ವೈರಾಗ್ಯೋಪೇತವಾದ ಮನಸ್ಸಿಗೂ ಅಭಿಮಾನಿಯಾಗಿರುವರು. ಇವರ ದೇಹವು 28 ಲಕ್ಷಣದಿಂದ ಕೂಡಿದೆ. ಆದಿಯಲ್ಲಿ ಯಮಧರ್ಮರಾಜನ ಪತ್ನಿಯಾದ ಶ್ಯಾಮಲಾದೇವಿಯಲ್ಲಿ ಹರಿ ಮತ್ತು ವಾಯುದೇವರ ಆವೇಶದಿಂದ ಕೂಡಿಕೊಂಡು ನರನೆಂಬ ಹೆಸರಿನಿಂದ ಅವತರಿಸಿದರು. ತ್ರೇತಾಯುಗದಲ್ಲಿ ಸಂಕರ್ಷಣ ರೂಪಿ ಪರಮಾತ್ಮನ ಆವೇಶದಿಂದ ಕೂಡಿಕೊಂಡು ಲಕ್ಷ್ಮಣರಾಗಿಯೂ, ದ್ವಾಪರಯುಗದಲ್ಲಿ ಶುಕ್ಲಕೇಶ ರೂಪ ಪರಮಾತ್ಮನ ಆವೇಶದಿಂದ ಯುಕ್ತರಾಗಿ ಬಲರಾಮರಾಗಿಯೂ ಅವತರಿಸಿದರು.

ಯೋಗಿಗಳ ಹೃದಯಕೆ ನಿಲುಕ ನಿಗ
ಮಾಗಮೈಕ ವಿನುತನ ಪರಮನು-
ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ
ಭೂ ಗಗನ ಪಾತಾಳ ವ್ಯಾಪ್ತನ
ಯೋಗ ನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ (ಹ.ಸಾ. 32-9)

ಆದಿ ಶೇಷಾಯ ನಮಃ. ತವ ಸುಪ್ರಭಾತಂ.

ಆದಿಶೇಷರೇ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

ಮಹಾರುದ್ರದೇವರು :- ಸೃಷ್ಟಿಯ ಆದಿಯಲ್ಲಿ ವಿರಿಂಚಿನಾಮಕ ಬ್ರಹ್ಮ ಮತ್ತು ವಾಣಿಯರಿಂದ ಹುಟ್ಟಿಬಂದ ಇವರ ಶರೀರವು ಸತ್ತ್ವ - ತಮೋ - ರಜೋ ಗುಣಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿಯಾದ ಭಗವಂತನ ದಕ್ಷಿಣಪಾದದಿಂದ ಜನಿಸಿಬಂದ ಇವರು, ಶೇಷದೇವರು ಜನಿಸಿದ 1000 ವರ್ಷಗಳ ನಂತರ ಹುಟ್ಟಿಬಂದರು. ತಾರತಮ್ಯದಲ್ಲಿ ಸರಸ್ವತೀ ಭಾರತೀದೇವಿಯರಿಂದ 100 ಗುಣಗಳಿಂದ ಕಡಿಮೆ ಎನಿಸಿಕೊಂಡು 5 ನೇ ಕಕ್ಷದಲ್ಲಿ ಇರುವರು. ಇವರಿಗೆ 100 ಬ್ರಹ್ಮಕಲ್ಪಗಳ ಸಾಧನೆ. ಇವರ ದೇಹವು 28 ಲಕ್ಷಣಗಳಿಂದ ಕೂಡಿದೆ. ಮನೋನಿಯಾಮಕರೆನಿಸಿಕೊಂಡ ಇವರು ಅಹಂಕಾರ ತತ್ತ್ವಕ್ಕೂ ಆಹಾರಪದಾರ್ಥಗಳಲ್ಲಿ ಸೇರಿದ ಹುಳಿಯಿಲ್ಲದ ಪದಾರ್ಥಗಳಿಗೆ

ಅಭಿಮಾನಿಯಾಗಿ, ಈಶಾನ್ಯ ದಿಕ್ಕಿಗೆ ಅಭಿಮಾನಿಯಾಗಿರುವರು. ಇವರು ಸ್ಮಶಾನವಾಸಿಗಳೂ ಹೌದು. ನಿತ್ಯದಲ್ಲೂ ಪ್ರತಿ ಸಾತ್ವಿಕ ಜೀವಿಯ ಹೃದಯ ಸ್ಥಾನದಲ್ಲಿ ಸಂಕರ್ಷಣನಾಮಕ ಪರಮಾತ್ಮನಿಂದ ಪಾಪಪುರುಷನ ದಹನವಾಗುವುದು. ಇಲ್ಲೇ ಮಹಾರುದ್ರದೇವರು ಮನೋನಿಯಾಮಕರಾಗಿ ವಾಸಮಾಡುತ್ತಿರುವರು. ಇದರಿಂದ ಇದು ಮಹಾರುದ್ರದೇವರ ಆವಾಸವೆನಿಸಿದ ಮೊದಲನೆಯ ಸ್ಮಶಾನ. ಪ್ರಳಯಕಾಲವು ಆಸನ್ನವಾದಾಗ ಲೋಕಗಳೆಲ್ಲವೂ ಸುಟ್ಟು ಬೂದಿಯಾಗುವುವು. ಇದು ಮಹಾಸ್ಮಶಾನ. ಅಲ್ಲಿ ರುದ್ರದೇವರು ಪರವಶದಿಂದ ಭಗವಂತನ ಗುಣಗಾನ ಮಾಡುತ್ತಾ ನರ್ತಿಸುವರು. ಇದು ರುದ್ರದೇವರು ವಾಸಿಸುವ ಎರಡನೇ ಸ್ಮಶಾನ. ಮಹಾರುದ್ರದೇವರು ಆದಿಯಲ್ಲಿ ಜೈಗೀಷ್ವವ್ಯ ಎಂಬ ನಾಮದಿಂದ ಋಷಿಯಾಗಿ ಅವತರಿಸಿದರು. ನಂತರ ಅತ್ರಿಪತ್ನಿ ಅನುಸೂಯಾದೇವಿಯಲ್ಲಿ ದುರ್ವಾಸಮುನಿಗಳಾಗಿಯೂ, ದ್ರೋಣನ ಪುತ್ರ ಅಶ್ವತ್ಥಾಮನಾಗಿಯೂ, ಅರ್ಜುನ ನೊಟ್ಟಿಗೆ ಯುದ್ಧಮಾಡಿದ ವ್ಯಾಧನಾಗಿಯೂ, ವೇದವ್ಯಾಸರ ಪುತ್ರ ಶುಕಾಚಾರ್ಯರಾಗಿಯೂ ಅವತರಿಸಿದರು.

ನಂದಿವಾಹನ ನಳಿನಧರ ಮೌ| ಳೀಂದು ಶೇಖರ ಶಿವ ತ್ರಯಂಬಕ
ಅಂಧಕಾಸುರ ಮಥನ ಗಜಶಾರ್ದೂಲ ಚರ್ಮಧರ
ಮಂದಜಾಸನ ತನಯ ತ್ರಿಜಗ| ದ್ವಂದ್ಯ ಶುದ್ಧಸ್ಫಟಿಕ ಸನ್ನಿಭ
ವಂದಿಸುವೆ ನನವರತ ಪಾಲಿಸೊ ಪಾರ್ವತೀ ರಮಣ (ಹ.ಸಾ. 32-10)

ರುದ್ರಾಯ ನಮಃ ತವಸುಪ್ರಭಾತಂ.

ರುದ್ರದೇವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## ಉದಯರಾಗ

ಏಳು ಗಂಗಾಧರನೆ ಏಳು ಮೃತ್ಯುಂಜಯನೇ
ಏಳು ಪಾರ್ವತಿಪ್ರಿಯ ಕೈಲಾಸ ನಿಲಯ
ಏಳಯ್ಯ ಹರನೆ ಬೆಳಗಾಯಿತು ||ಪ||

ನಂದೀಶ ತಾ ಬಂದು ನಿಂತಿಹನು ಸೇವೆಗೆ
ಬಂದಿಹರು ಶೃಂಗಿ ಭೃಂಗಿ ನೀಟಿ ತುಂಡಿ ನಟಿ ನಟರು
ಗಂಧರ್ವ ಗಣ ಬಂದು ಗಾಯನ ಮಾಡುವರು
ಇಂದು ಶೇಖರ ಏಳು ಮೈದೋರು ಹರನೇ ||೧||

ನಾರದರು ತುಂಬುರರು ಸಾರಿ ಸುರಗಣರೆಲ್ಲ
ಸಾರುತಲಿ ಮಹಿಮೆಯನು ಆರುತಿಯ ಪಿಡಿದು ನಿಂತಿಹರು
ತಾರಕಮಂತ್ರ ಉಪದೇಶಮಾಡಿ ಸುಜನರು-
ದ್ಧಾರ ಮಾಡೇಳಯ್ಯ ಮಾರಮರ್ದನನೇ || ೨ ||

ತ್ರಿಪುರಾರಿ ತ್ರ್ಯಂಬಕನೆ ತ್ರಿಜಗಪಾವನ ಚರಿತ
ತ್ರಿದಶ ವಂದಿತ ಚರಣ ತ್ರಿಗುಣಾತ್ಮಕ ತ್ರಿಭುವನಾಧಾರೀ
ತ್ರಿವಿಧ ಜೀವರಿಗೆಲ್ಲ ತ್ರಿವಿಧತಾಪವ ಬಿಡಿಸೋ
ತ್ರಿವಿಧ ಗತಿಯನೆ ಕೊಡಿಸೋ ತ್ರಿಶೂಲಧಾರಿ || ೩ ||

ಕಲುಷಹರ ಕಾಮಾರಿ ಕಿಡಿಗಣ್ಣ ಕೇಶ ಸುಮ ಕು-
ಟಿಲಘ್ನ ಕೂಟಸ್ಥನೆ ಕೇಯೂರ ಕಟಿಕಂಧರ ಕೈವಲ್ಯದಾಯಕನೆ
ಕೋಮಲಾಂಗನೆ ಕೌಮುದೀ ಕಂಧರನೆ
ಕಂಬುಕಂಧರ ಏಳು ಕಾಳಿಕಾರಮಣನೇ || ೪ ||

ಚತುರಾಸ್ಯ ಸಂಭೂತ ಚಾರು ಮಂಗಳ ಚರಿತ ಚಿದಂಬರ
ಚೀರ್ಣ ತಪಭರಿತ ಚ್ಯುತಿದೂರ ಚೂಡಕರ್ಮ ಬರ್ಹೀ
ಭೂತಾಭಿಮಾನಿಯೇ ಚೈಲ ಕೃತಗಜಚರ್ಮ ಚೋದಿತಾಖಿಲ ಭೂತ
ಚತುಷಷ್ಟಿ ಕಳಾಪೂರ್ಣ ಚಂಡಿಕಾರಮಣ ಏಳಯ್ಯ ಚಾರುವದನ || ೫ ||

ಮೋಹಶಾಸ್ತ್ರವ ರಚಿಸಿ ಮೋಹಿಸ್ಯಮರರನೆಲ್ಲ ವರದನಾಜ್ಞದಿ
ವಿರಚಿಸಿ ಪಾಶುಪತ - ಲಿಂಗ - ಶೈವ ಶಾಸ್ತ್ರಗಳನಾ
ಮೋಹಿಸುತ ದೈತ್ಯರನ ಐದಿಸುವಿ ತಮೋಗತಿಗೆ ಸೈಗುರುವೆ ನೀನಹುದೋ
ಭಳಿ ಭಳಿರೆ ದೇವರ್ಕಳಾಮಹಿಮೆ ವೈಷ್ಣವಾಗ್ರಣಿಯೆ || ೬ ||

ಮೃಡನೆ ಭಕುತರಿಗೆ ವರವ ಕೊಡುವಲ್ಲಿ ನಿನ್ನಂಥ
ಒಡೆಯರನ ಕಾಣೆನೆಂದಡಿಗಳಿಗೆರಗಿ
ಧೃಢ ಭಕುತಿಯಂ ಬೇಡ್ವೆ ಬಿಡಿಸು ಭವತಾಪವನು
ನಡುಪುರೀಶನ ಸಖನೆ ಜೈಗೀಷವ್ಯ ದುರ್ವಾಸ ಕಿರಾತ ದ್ರೋಣಿ ಶಂಕರನೆ || ೭ ||

## 4 ನೇ ಕಕ್ಷ - ಸರಸ್ವತೀ - ಭಾರತೀದೇವಿಯರು

ಸರಸ್ವತೀದೇವಿ :- ಸೃಷ್ಟಿಯ ಆದಿಯಲ್ಲಿ ಕೃತಿಪತಿಪ್ರದ್ಯುಮ್ನನಿಂದ ಹುಟ್ಟಿಬಂದ ಇವರ ಶರೀರವು ಮಹತ್ತತ್ತ್ವಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿಯಾದ ಭಗವಂತನ ದಕ್ಷಿಣ ಹಸ್ತದಿಂದ ಹುಟ್ಟಿ ಬಂದ ಇವರು ವಾಯುದೇವರು ಹುಟ್ಟಿದ ಒಂದು ವರ್ಷದ ನಂತರ ಜನಿಸಿದರು. ತಾರತಮ್ಯದಲ್ಲಿ ವಾಯುದೇವರಿಂದ 3 ಗುಣಗಳಿಂದ ಕಡಿಮೆ ಎನಿಸಿಕೊಂಡು 4ನೇ ಕಕ್ಷದಲ್ಲಿರುವರು. ಇವರಸಾಧನೆ 200 ಬ್ರಹ್ಮಕಲ್ಪಗಳು. ಅವ್ಯಕ್ತ ತತ್ತ್ವಕ್ಕೆ ಅಭಿಮಾನಿಯಾದ ಸರಸ್ವತೀದೇವಿಯರು ಶ್ರೀಪತಿ ಕೇಶವನನ್ನು ಉಪಾಸಿಸುವರು. ಇವರು ವೇದಗಳಿಗೂ ಮತ್ತು ಹಾಲಿಗೂ ಅಭಿಮಾನಿಯಾಗಿರುವರು. ಬ್ರಹ್ಮಾಣಿ - ಗಾಯತ್ರೀ - ಸಾವಿತ್ರೀ - ಸಂಸ್ಕೃತಿ - ಪ್ರಕೃತಿ ಮುಂತಾದ ನಾಮಗಳಿಂದ ಪ್ರಸಿದ್ಧರಾಗಿರುವರು. ಇವರಿಗೆ ಅವತಾರಗಳಿಲ್ಲ.

ಚತುರವದನನ ರಾಣಿ ಅತಿರೋ -
ಹಿತ ವಿಮಲ ವಿಜ್ಞಾನಿ ನಿಗಮ-
ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ
ನತಿಸಿ ಬೇಡುವೆ ಜನನೀ ಲಕ್ಷ್ಮೀ-
ಪತಿಯ ಗುಣಗಳ ತುತಿಪುದಕೆ ಸ-
ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ ಸದನದಲಿ (ಹ.ಸಾ. 1-5)

ಸರಸ್ವತ್ಯೈ ನಮಃ. ತವ ಸುಪ್ರಭಾತಂ.

ಸರಸ್ವತೀದೇವಿಯರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

ಭಾರತೀದೇವಿ :- ಸೃಷ್ಟಿಯ ಆದಿಯಲ್ಲಿ ಕೃತಿಪತಿ ಪ್ರದ್ಯುಮ್ನನಿಂದ ಹುಟ್ಟಿ ಬಂಧ ಇವರ ಶರೀರವು ಮಹತ್ತತ್ತ್ವಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ದಕ್ಷಿಣ ಹಸ್ತದಿಂದ ಜನಿಸಿಬಂದ ಇವರು ಸರಸ್ವತೀದೇವಿಯು ಜನಿಸಿದ ಒಂದು ವರ್ಷದ ನಂತರ ಹುಟ್ಟಿದರು.

ತಾರತಮ್ಯದಲ್ಲಿ ವಾಯುದೇವರಿಂದ 3 ಗುಣಗಳಿಂದ ಕಡಿಮೆ ಎನಿಸಿಕೊಂಡು ನಾಲ್ಕನೇ ಕಕ್ಷದಲ್ಲಿರುವರು. ಇವರಿಗೆ 200 ಬ್ರಹ್ಮಕಲ್ಪಗಳ ಸಾಧನೆ. ಅವ್ಯಕ್ತತತ್ತ್ವಕ್ಕೆ ಅಭಿಮಾನಿಯಾದ ಭಾರತೀದೇವಿಯರು ಶ್ರೀಪತಿ ಕೇಶವನನ್ನು ಉಪಾಸಿಸುವರು. ಬುಧ್ಯಾಭಿಮಾನಿಯೆನಿಸಿದ ಇವರು ಆಹಾರಪದಾರ್ಥಗಳಲ್ಲಿ ಒಂದಾದ ಪರಮಾನ್ನಕ್ಕೆ ಅಭಿಮಾನಿಯಾಗಿರುವರು. ಭಾರತೀದೇವಿಯರು ತ್ರೇತಾಯುಗದಲ್ಲಿ ಶಿವನೆಂಬ ಬ್ರಾಹ್ಮಣನಿಂದ ಶಿವಕನ್ಯೆ ಎಂಬ ಹೆಸರಿನಿಂದ ಹುಟ್ಟಿದರು. ತ್ರೇತೆಯ ಕಡೆಯ ಭಾಗದಲ್ಲಿ ನಳರಾಜನ ಪತ್ನಿ ದಮಯಂತಿಯಲ್ಲಿ ಇಂದ್ರಸೇನಾ ಎಂಬ ಹೆಸರಿನಿಂದ ಅವತರಿಸಿದರು. ದ್ವಾಪರದಲ್ಲಿ ದ್ರೌಪತಿಯಾಗಿಯೂ, ಕಾಳೀ ಎಂಬ ಹೆಸರಿನಿಂದ ಕಾಶಿರಾಜನ ಮಗಳಾಗಿಯೂ ಅವತರಿಸಿ ಭೀಮಸೇನನಿಗೆ ಪತ್ನಿ ಎನಿಸಿದರು.

ಕೃತಿರಮಣ ಪ್ರದ್ಯುಮ್ನ ನಂದನೆ-
ಚತುರವಿಂಶತಿ ತತ್ತ್ವಪತಿದೇವ-
ತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ
ಸತತ ಹರಿಯಲಿ ಗುರುಗಳಲಿ ಸ-
ದ್ರತಿಯ ಪಾಲಿಸಿ ಭಾಗವತ ಭಾ-
ರತ ಪುರಾಣ ರಹಸ್ಯ ತತ್ತ್ವಗಳರುಪು ಕರುಣದಲಿ (ಹ.ಸಾ. 1-6)

ಭಾರತ್ಯೈ ನಮಃ. ತವ ಸುಪ್ರಭಾತಂ.

ಭಾರತೀದೇವಿಯರೇ ! ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

## 3ನೇ ಕಕ್ಷ - ಬ್ರಹ್ಮ - ವಾಯುದೇವರು

ಬ್ರಹ್ಮದೇವರು :- ಸೃಷ್ಟಿಯ ಆದಿಯಲ್ಲಿ ನಾರಾಯಣನಿಂದ ಕಾಲನೆಂಬ ಹೆಸರಿನಿಂದಲೂ, ವಾಸುದೇವನಿಂದ 'ಪುರುಷ' ಎಂಬ ಹೆಸರಿನಿಂದಲೂ, ಪ್ರದ್ಯುಮ್ನನಿಂದ **'ವಿರಿಂಚಿ'** ಎಂಬ ಹೆಸರಿನಿಂದಲೂ ಅವತರಿಸಿದರು. ಪದ್ಮಕಲ್ಪದಲ್ಲಿ ಪರಮಾತ್ಮನ ನಾಭಿಯಿಂದ ಚತುರ್ದಶ ದಳಾತ್ಮಕವಾದ ಪದ್ಮದಲ್ಲಿ ಜನಿಸಿದರು. ಇವರೇ ಚತುರ್ಮುಖಬ್ರಹ್ಮರು. ಇವರ ಶರೀರವು ಮಹತ್ತತ್ತ್ವಾತ್ಮಕವಾದುದು. ತಾರತಮ್ಯದಲ್ಲಿ ಲಕ್ಷ್ಮೀದೇವಿಯಿಂದ ಕೋಟಿ ಗುಣಗಳಿಂದ ಕಡಿಮೆ ಎನಿಸಿಕೊಂಡು, 3ನೇಯ ಕಕ್ಷದಲ್ಲಿರುವರು. ಇವರ ಸಾಧನೆ 200 ಬ್ರಹ್ಮಕಲ್ಪಗಳು. ಇವರ ಶರೀರವು 32 ಲಕ್ಷಣಗಳಿಂದ ಯುಕ್ತವಾಗಿದೆ. ಮಹತ್ತತ್ತ್ವಕ್ಕೆ ಅಭಿಮಾನಿಗಳಾದ ಇವರು ಲಕ್ಷ್ಮೀಪತಿ ನಾರಾಯಣನನ್ನು ಉಪಾಸಿಸು

ವರು. ಆಹಾರ ಪದಾರ್ಥಗಳಲ್ಲಿಯ 'ಮಂಡಿಗೆ' ಎಂಬ ಭಕ್ಷ್ಯಕ್ಕೆ ಅಭಿಮಾನಿಗಳು. ಇವರು ಜೀವೋತ್ತಮರು; ಜಗದ್ಗುರುಗಳು; ಸದಾಪರೋಕ್ಷಿಗಳು. ಇವರಿಗೆ ಅವತಾರಗಳಿಲ್ಲ.

ನಿರುಪಮಾನಂದಾತ್ಮಭವ ನಿ-
ರ್ಜರ ಸಭಾಸಂಸೇವ್ಯ ಋಜುಗಣ
ದರಸೆ ಸತ್ತ್ವಪ್ರಚುರ ವಾಣೀಮುಖ ಸರೋಜೇನ
ಗರುಡ ಶೇಷ ಶಶಾಂಕದಳ ಶೇ-
ಖರರ ಜನಕ ಜಗದ್ಗುರುವೆ ತ್ವ-
ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ (ಹ.ಸಾ. 1-3)

ಬ್ರಹ್ಮಣೇ ನಮಃ. ತವ ಸುಪ್ರಭಾತಂ.

ಬ್ರಹ್ಮದೇವರೇ, ನಿಮಗೆ ಅನಂತ ನಮನಗಳು. ನಿಮಗೆ ಸುಪ್ರಭಾತವಾಗಲಿ.

ವಾಯುದೇವರು :- ಸೃಷ್ಟಿಯ ಆದಿಯಲ್ಲಿ ಜಯಾಪತಿ ಸಂಕರ್ಷಣನಿಂದ ಹುಟ್ಟಿ ಬಂದ ಇವರ ಶರೀರವು ಮಹತ್ತತ್ತ್ವಾತ್ಮಕವಾದುದು. ಪದ್ಮಕಲ್ಪದಲ್ಲಿ ವಿರಾಡ್ರೂಪಿ ಭಗವಂತನ ಮನಸ್ಸಿನಿಂದ ಹುಟ್ಟಿಬಂದ ಇವರು ಬ್ರಹ್ಮದೇವರು ಹುಟ್ಟಿದ 10 ವರ್ಷಗಳ ನಂತರ ಜನಿಸಿದರು. ತಾರತಮ್ಯದಲ್ಲಿ ಲಕ್ಷ್ಮೀದೇವಿಯಿಂದ ಕೋಟಿ ಗುಣಗಳಿಂದ ಕಡಿಮೆ ಎನಿಸಿಕೊಂಡು 3ನೇಯ ಕಕ್ಷದಲ್ಲಿರುವರು. ಇವರ ಸಾಧನೆ 200 ಬ್ರಹ್ಮಕಲ್ಪಗಳು. ಇವರ ದೇಹ 32 ಲಕ್ಷಣಗಳಿಂದ ಕೂಡಿದುದು. ಮಹತ್ತತ್ತ್ವಕ್ಕೆ ಅಭಿಮಾನಿಗಳಾದ ಇವರು ಲಕ್ಷ್ಮೀಪತಿಯಾದ ನಾರಾಯಣನನ್ನು ಉಪಾಸಿಸುವರು. ಆಹಾರ ಪದಾರ್ಥಗಳಲ್ಲಿ ಒಂದಾದ ಬೆಣ್ಣೆಗೆ ಅಭಿಮಾನಿಗಳು. ಇವರಿಗೆ ಅನಂತರೂಪಗಳು. ಇವರು ಕೂರ್ಮ ರೂಪದಿಂದ 14 ಲೋಕಗಳನ್ನು ಹೊತ್ತು ಶ್ರೀಶನ ಅನುಗ್ರಹದಿಂದ ಅದೇರೂಪದಿಂದ ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿರುವರು. ಪ್ರತಿ ಜೀವಿಯಲ್ಲಿ ನಿಂತು ದಿನಕ್ಕೆ 21600 ಹಂಸಮಂತ್ರಾತ್ಮಕವಾದ ಶ್ವಾಸಜಪಗಳನ್ನು ಮಾಡುವರು. ಇವರು ವಜ್ರ ಸಮಾನವಾದ ದೇಹವುಳ್ಳವರಾದ ಕಾರಣ "ಆಖಣಾಶ್ಮ" ಎನ್ನುವ ಹೆಸರಿನಿಂದ ಪ್ರಸಿದ್ಧರಾಗಿರುವರು. ಸಮುದ್ರ ಮಥನ ಕಾಲದಲ್ಲಿ ಉತ್ಪನ್ನವಾದ ಕಾಲಕೂಟ ವಿಷವನ್ನು ಪಾನಮಾಡಿ ಜೀರ್ಣಿಸಿಕೊಂಡ ಮಹಾನ್ ವ್ಯಕ್ತಿಗಳು. ತ್ರೇತಾಯುಗದಲ್ಲಿ ಹನುಮಂತನಾಗಿಯೂ, ದ್ವಾಪರಯುಗದಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಅವತರಿಸಿದರು.

ಆರು ಮೂರೆರಡೊಂದು ಸಾವಿರ
ಮೂರೆರಡು ಶತ ಶ್ವಾಸ ಜಪಗಳ

ಮೂರುವಿಧ ಜೀವರೊಳಗಬ್ಜಜ ಕಲ್ಪ ಪರಿಯಂತ
ತಾರಚಿಸಿ ಸತ್ತ್ವರಿಗೆ ಸುಖ ಸಂ-
ಸಾರ ಮಿಶ್ರರಿಗಧಮಜನರಿಗ-
ಪಾರ ದುಃಖಗಳೀವ ಗುರುಪವಮಾನ ಸಲಹೆಮ್ಮ (ಹ.ಸಾ. 1-4)

ವಾಯವೇ ನಮಃ; ತವ ಸುಪ್ರಭಾತಂ.

ವಾಯು ದೇವರೇ ! ನಿಮಗೆ ಅನಂತ ನಮನಗಳು; ನಿಮಗೆ ಸುಪ್ರಭಾತವಾಗಲಿ.

## ಉದಯರಾಗ

ಏಳು ಹನುಮಂತ ಎಷ್ಟು ನಿದ್ರಿ || ಪ ||

ಮಾತನಾಡಿಸಲು ಬೇಕು ಮುದ್ರಿಕೇ ತರಲು ಬೇಕು
ಹರಿ ಕುಶಲವ ಜಾನಕಿಗೆ ತಿಳಿಸಬೇಕು
ವನವ ಕೀಳಲು ಬೇಕು ಚೂಡಾ ಮಣಿಯ ತರಲು ಬೇಕು
ಹರಿ ಹರುಷದಿ ಖ್ಯಾತಿಯ ಪಡೆಯಲು ಬೇಕು || ೧ ||

ಶರಧಿಯ ಲಂಘಿಸಬೇಕು ರಘುಪತಿಯ ಕೂಡಿರಬೇಕು
ದುರುಳ ಇಂದ್ರಜಿತನ ಗೆಲಿಯ ಬೇಕು
ಅನುಜ ಲಕ್ಷ್ಮಣಗೆ ಸಂಜೀವನ ತಂದು ಕೊಡಲಿ ಬೇಕು
ಹನುಮಂತ ಬಲವಂತನೆಂದೆನಿಸಬೇಕು || ೨ ||

ದುಷ್ಟರಕ್ಕಸರನೆಲ್ಲ ಕುಟ್ಟಿ ಕೆಡಹಲಿ ಬೇಕು
ಹತ್ತು ತಲೆ ರಾವಣನ ಬಲವಿಳಿಸಲಿಬೇಕು
ಭಕ್ತ ವಿಭೀಷಣಗೆ ಪಟ್ಟಗಟ್ಟಲು ಬೇಕು
ಲಕ್ಷ್ಮಿಸಹಿತ ಅಯೋಧ್ಯಕೆ ತೆರಳಲು ಬೇಕು || ೩ ||

ಕುರುಕುಲದಲ್ಲಿ ಕುಂತಿಸುತನಾಗಿ ಜನಿಸಲು ಬೇಕು
ರಣದಲ್ಲಿ ಕೌರವರ ಗೆಲಿಯ ಬೇಕು
ವನದೊಳಗೆ ಘನ ತೃಷೆಯ ಘಾಸಿಪಡಿಸಲು ಬೇಕು
ಮಡದಿಗೆ ಸೌಗಂಧಿಕ ತರಲು ಬೇಕು || ೪ ||

ಯತಿಯಾಗಿ ಬರಬೇಕು ಕುಮತ ಖಂಡಿಸಬೇಕು ಅ-
ದ್ಭುತವಾದಿಗಳ ಗೆಲಿಯಬೇಕು

ಮಧ್ವಶಾಸ್ತ್ರವ ಲೋಕದಲ್ಲಿ ಬೋಧಿಸಬೇಕು
ಮುದ್ದು ಪುರಂದರವಿಠಲನ ಭಜಿಸಬೇಕು || ೫ ||

------

ಏಳು ಮಾರುತಿ ಬೆಳಗಾಯಿತೆಂದು
ಎಬ್ಬಿಸಿದಳಂಜನಾ ದೇವಿ ಬಂದೂ || ಪ ||

ಸೇತುಗಟ್ಟಲು ಬೇಕು ಶರಧಿದಾಟಲು ಬೇಕು
ಮಾತೆಗೆ ಉಂಗುರವ ಕೊಡಲು ಬೇಕು
ಪಾತಕ ರಾವಣನ ಶಿರವ ತರಿಯಲು ಬೇಕು
ಸೀತಾಪತಿ ರಾಮನಿಗೆ ನಮಿಸಬೇಕು || ೧ ||

ನಿಂತು ಕಳೆಯಲು ಬೇಕು ಅಜ್ಞಾತವಾಸವನು
ಪಂಥದಲಿ ಕೀಚಕನ ಬಗೆಯ ಬೇಕು
ತಂತ್ರದಲಿ ಗೆಲಿಯ ಬೇಕು ಶಕುನಿ ದುರ್ಯೋಧನರ
ಕುಂತಿ ನಂದನ ನೆಂದು ಹೆಸರಾಗಬೇಕು || ೨ ||

ಮಧ್ವರಾಯರು ಎಂದು ಪ್ರಸಿದ್ಧರಾಗಲು ಬೇಕು
ತಿದ್ದಿ ಹಾಕಲು ಬೇಕು ಸಕಲ ಗ್ರಂಥಗಳ
ಅದ್ವೈತವಾದಿಗಳ ಗೆದ್ದು ಕೆಡಹಲು ಬೇಕು
ಮುದ್ದು ಪುರಂದರ ವಿಠಲನ ದಾಸ ನೆಂದೆನಿಸಬೇಕು || ೩ ||

## 2ನೇ ಕಕ್ಷ - ಲಕ್ಷ್ಮೀದೇವಿಯರು

ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನ ನಿಯತ ಪತ್ನಿ - ನಿತ್ಯ ಮುಕ್ತಳು. ಅಪ್ರಾಕೃತ ಶರೀರ ಉಳ್ಳವಳು. ಶ್ರೀಹರಿಗೆ ಗುಣದಿಂದ ಅಸಮಳು. ದೇಶಕಾಲಗಳಿಂದ ಸಮಳಾಗಿರುವಳು. ಇದರಿಂದಾಗಿಯೇ ಇವಳಿಗೆ 'ಸಮಾಸಮೆ' ಎಂದು ಹೆಸರು. ಅವ್ಯಕ್ತ ತತ್ತ್ವಕ್ಕೆ ಮುಖ್ಯಾಭಿಮಾನಿಯಾಗಿರುವಳು. ಇವಳು ಶ್ರೀ ಭೂ, ದುರ್ಗಾದಿ ಅನಂತ ರೂಪಗಳುಳ್ಳವಳು. ಶ್ರೀ ರೂಪದಿಂದ ಸತ್ತ್ವಗುಣಕ್ಕೂ ಭೂರೂಪದಿಂದ ರಜೋಗುಣಕ್ಕೂ ದುರ್ಗಾರೂಪದಿಂದ ತಮೋ ಗುಣಕ್ಕೂ ನಿಯಾಮಕಳಾಗಿರುವಳು. ವೇದ, ದೇಶ, ಕಾಲ, ಪ್ರಕೃತಿ, ಕರ್ಮಗಳಿಗೆ ಮುಖ್ಯಾಭಿಮಾನಿಯಾದ ಇವಳು ತುಪ್ಪಕ್ಕೂ ಅಭಿಮಾನಿಯಾಗಿರುವಳು. ಶ್ರೀಹರಿಯ ಸೇವೆಯಲ್ಲಿ ಇವಳಿಗೆ ಸಮರಾದ ಭಕ್ತರು ಮತ್ತೊಬ್ಬರಿಲ್ಲ. ಶ್ರೀಹರಿ ಎಲ್ಲೆಲ್ಲಿ ಯಾವಾಗ ಯಾವಯಾವ ರೂಪದಿಂದ ಅವತರಿಸುವನೋ ಆಗಾಗ

ತಾನೂ ಅವತರಿಸುವಳು. ಸೀತಾ, ರುಕ್ಮಿಣೀ ಪದ್ಮಾವತಿ ಮೊದಲಾದವುಗಳು ಮಹಾಲಕ್ಷ್ಮಿಯ ಅವತಾರಗಳು.

ನಿತ್ಯ ಮುಕ್ತಳೆ ನಿರ್ವಿಕಾರಳೆ
ನಿತ್ಯ ಸುಖಸಂಪೂರ್ಣೆ ನಿತ್ಯಾ-
ನಿತ್ಯ ಜಗದಾಧಾರೆ ಮುಕ್ತಾಮುಕ್ತ ಗಣ ವಿನುತೆ
ಚಿತ್ತೈಸು ಬಿನ್ನಪವ ಶ್ರೀ ಪುರು-
ಷೋತ್ತಮನ ವಕ್ಷೋನಿವಾಸಿನಿ
ಭೃತ್ಯವತ್ಸಲಳೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೇ (ಹ.ಸಾ. 32-2)

ಶ್ರೀ ಮಹಾಲಕ್ಷ್ಮಿ ನಮಃ; ತವಸುಪ್ರಭಾತಂ.

ಶ್ರೀ ಮಹಾಲಕ್ಷ್ಮಿಯೇ! ನಿನಗೆ ಅನಂತ ನಮನಗಳು. ನಿನಗೆ ಸುಪ್ರಭಾತವಾಗಲಿ.

## 1ನೇ ಕಕ್ಷ ಶ್ರೀಮನ್ನಾರಾಯಣ

ನಾರಾಯಣನು ಸರ್ವೋತ್ತಮನು. ಪರಬ್ರಹ್ಮಸ್ವರೂಪನು. ಅನಂತ ಕಲ್ಯಾಣ ಗುಣಪೂರ್ಣನೂ, ದೋಷದೂರನೂ ಆಗಿರುವನು. ಸರ್ವತಂತ್ರ ಸ್ವತಂತ್ರನಾದ ಈತನಿಂದಲೇ, ಈ ಚರಾಚರಾತ್ಮಕವಾದ ಜಗತ್ತಿಗೆ ಸೃಷ್ಟಿ - ಸ್ಥಿತಿ - ಲಯ - ನಿಯಮನ - ಜ್ಞಾನ - ಅಜ್ಞಾನ - ಬಂಧ - ಮೋಕ್ಷಾದಿಗಳು ಆಗುವವು. ದ್ವೇಷ - ಸ್ನೇಹ, ಉದಾಸೀನಗಳಿಂದ ಅತ್ಯಂತ ದೂರನು. ಖೇದ - ಮೋದ - ಜಯಾಪಜಯಗಳಿಲ್ಲದ ಚಿನ್ಮಯ ಮೂರುತಿಯು ಈತನು. ಸರ್ವತ್ರ ವ್ಯಾಪಿಸಿ, ಸಮಶಬ್ದವಾಚ್ಯನಾಗಿರುವನು. ನಿತ್ಯ ತೃಪ್ತನೂ, ಪರಿಪೂರ್ಣನೂ, ಆನಂದ ಸ್ವರೂಪಿಯಾದ ನಾರಾಯಣನು, ಕೇವಲ ಜೀವರ ಉದ್ಧಾರಕ್ಕಾಗಿ, ಅವರವರ ಗತಿಗಳನ್ನು ನೀಡುವುದಕ್ಕಾಗಿ, ಪ್ರಯೋಜನಾಪೇಕ್ಷೆ ಇಲ್ಲದೆ ಅನಂತ ರೂಪಗಳನ್ನು ಧರಿಸುವನು. ಜ್ಞಾನ ವೈರಾಗ್ಯಗಳಿಂದ ಪೂರ್ಣವಾದ ಭಕ್ತಿಗೆ ಮಾತ್ರ ಸುಲಭನಾಗಿರುವನು.

ಶ್ರೀರಮಣ ಸರ್ವೇಶ ಸರ್ವಗ
ಸಾರ ಭೋಕ್ತ ಸ್ವತಂತ್ರ ದೋಷ ವಿ-
ದೂರ ಜ್ಞಾನಾನಂದ ಬಲ ಐಶ್ವರ್ಯ ಗುಣಪೂರ್ಣ
ಮೂರು ಗುಣ ವರ್ಜಿತ ಸುಗುಣ ಸಾ-

ಕಾರ ವಿಶ್ವಸ್ಥಿತಿ ಲಯೋದಯ
ಕಾರಣ ಕೃಪಾಸಾಂದ್ರ ನರಹರೇ! ಸಲಹೋ ಸಜ್ಜನರ (ಹ.ಸಾ. 32-1)

ಉದಯರಾಗಗಳು

ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ |
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ||

ಕೌಸಲ್ಯಾ ಸುಪ್ರಜಾರಾಮ ! ಪೂರ್ವಾ ಸಂಧ್ಯಾ ಪ್ರವರ್ತತೇ |
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ||

ಪದ

ಏಳಯ್ಯ ಬೆಳಗಾಯಿತು || ಪ ||

ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿಯೊಡೆಯ ವೇಂಕಟೇಶ || ಅ.ಪ ||

ದಾಸರೆಲ್ಲರು ಬಂದು ಧೂಳಿ ದರುಶನ ಗೊಂಡು
ಲೇಸಾಗಿ ತಾಳ ದಂಡಿಗೆಯ ಪಿಡಿದು
ಕೇಶವನೆ ನಿಮ್ಮ ಶಿರಿನಾಮವನೆ ಸ್ಮರಿಸುತಲಿ
ವಾಸುದೇವನೆ ಉದಯದಲಿ ಪಾಡುತಿಹರೋ || ೧ ||

ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು
ಲೇಸಾಗಿ ಕೆನೆಮೊಸರು ಬೆಣ್ಣೆಯನು ಮೆದ್ದು
ಶೇಷಶಯನನೆ ಏಳು ಸಮುದ್ರ ಮಥನವ ಮಾಡು
ದೇಶ ಕೆಂಪಾಯಿತೇಳಯ್ಯ ಹರಿಯೇ || ೨ ||

ಅರಳು ಮಲ್ಲಿಗೆ ಜಾಜಿ ಪರಮಳದ ಪುಷ್ಪಗಳ
ಸುರರು ತಂದಿಹರಯ್ಯ ಸುಜನರೊಡನೆ
ಅರವಿಂದ ಲೋಚನನೆ ಕೋಳಿಕೂಗಿತು ಕೇಳು
ಪುರಂದರ ವಿಠಲನೆ ಬೆಳಗಾಯಿತು || ೩ ||

## ಪದ 2

ಏಳಯ್ಯ ಬೆಳಗಾಯಿತು || ಪ ||

ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ

ಸುಳಿವು ದೋರಯ್ಯ ನಿನ್ನ ಹಾರೈಸಿ ನಿಂತಿಹರು
ತಳುವ ಮಾಡದಿರಯ್ಯ ಸ್ವಾಮಿ ತಿರುಪತಿರಾಯ
ಸೆಳೆ ಮಂಚದಿಂದೇಳು ||೧||

ವೇದವನು ತರಲೇಳು ಮಂದರವ ಹೊರಲೇಳು
ಛೇದಿಸುತ ಅಸುರರನು ಭೂಮಿಯ ತರಲೇಳು
ಕಾದಿ ಹಿರಣ್ಯಕನ ಕರುಳ ಕೊರಳೊಳಗೆ ಧರಿಸೇಳು
ಕಾಯ್ದು ಬಲಿ ಬಾಗಿಲದೊಳು ||೨||

ಭೇದಿಸೀ ಭೂಮಿಯ ತ್ರಿಪಾದದಿಂದಲೇ ಏಳು
ಛೇದಿಸುತ ಕ್ಷತ್ರಿಯರ ಕೊಡಲಿಯಂ ಪಿಡಿ ಏಳು
ಸಾಧಿಸುತ ಶರಧಿಯಲಿ ಸೇತುವೆಯ ಕಟ್ಟೇಳು
ನಂದಗೋಪನ ಉದರದಿ ||೩||

ಪುರಮೂರ ಗೆಲಬೇಕು ಅರಿವೆಯನು ಕಳಿಬೇಕು
ದುರುಳರನು ಕೊಲಬೇಕು ತುರಗವಾಹನ ನಾಗು
ಪರಿಪರಿಯ ಕೆಲಸಗಳ ಮಾಡಲುದ್ಯೋಗಿಸದೆ
ಮರೆತು ನಿದ್ರೆಯ ಗೈವರೇ ||೪||

ಉರಿಗೈಯ್ಯ ನಟ್ಟಿದರೆ ಹರನೋಡಿ ಬಂದಿಹನು
ಗಿರಿಜೆ ವರವನು ಬೇಡ ಬೇಕೆಂದು ನಿಂದಿಹಳು
ಸುರಪಾರಿಜಾತವನು ಕೊಂಡು ಸುರರಾಜ ಬಂ-
ದಿರುವನೇಳಯ್ಯ ಹರಿಯೇ ||೫||

ಆಲದೆಲೆಯಿಂದೇಳು ಮಾಲಕುಮಿ ಬಂದಿಹಳು
ಹಾಲುಗಡಲಿಂದೇಳು ಶ್ರೀದೇವಿ ನಿಂದಿಹಳು
ಕಾಲಹೆಡೆಯಿಂದೇಳು ಭೂದೇವಿ ಬಂದಿಹಳು
ಸಾಲಮಂಚಗಳಿಂದಲಿ ||೬||

ಕ್ಷಿತಿನಾಥ ನೀನೇಳು ಸತ್ಯಭಾಮೆ ಬಂದಿಹಳು
ಮತಿ ವಂತ ನೀನೇಳು ಜಾಂಬವತಿ ಬಂದಿಹಳು
ಗತಿವಂತ ನೀನೇಳು ಶ್ರೀ ತುಳಸಿ ಬಂದಿಹಳು ಏ-
ಕಾಂತ ಸೇವೆಯ ಮಾಡಲು ||೭||

ಅಂಬುರುಹದಿಂದ ಜನಿಸಿದ ಬ್ರಹ್ಮಬಂದಿಹನು
ಗಂಭೀರಗಾಯನದ ನಾರದನು ನಿಂದಿಹನು
ರಂಭೆ ಮೇನಕ ಮೊದಲು ನರ್ತನಕೆ ಐದಿಹರು
ಶಂಬರಾರಿ ಪಿತನೆ ಏಳು || ೮ ||

ರಾಜಸೂಯವ ಕೊಳಲು ವಾಯುಸುತ ಬಂದಿಹನು
ತೇಜಿ ಯಾಟಕೆ ಅರ್ಜುನನು ಕರೆಯ ಬಂದಿಹನು
ಸಾಜಧರ್ಮಜ ಅಗ್ರಪೂಜೆ ಮಾಡುವೆನೆಂದು
ಹೂಜೆಯನೆ ಪಿಡಿದು ಕೊಂಡು || ೯ ||

ದೇವನಿನ್ನಂಘ್ರಿಯನು ಪೂಜೆಮಾಡುವೆವೆಂದು
ಕಾವೇರಿ - ಕೃಷ್ಣೆ - ಗೌತಮಿ - ಗಂಗೆ - ಮಲಪಹಾರಿ
ಸಾವಧಾನದಿ ಯಮುನೆ - ತುಂಗೆ - ಸರಸ್ವತಿ
ಭೀಮರಥಿ - ನೇತ್ರಾವತಿ || ೧೦ ||

ದುರಿತ ಬಂಧನವನ್ನು ಪರಿಹರಿಸಿದೆಯೊ ಸ್ವಾಮಿ
ದುರಿತ ದುಷ್ಕರ್ಮವನು ದೇವ ಎಂದರೆ ಸುಡುವೆ
ದುರಿತ ತಾಪಕೆ ಚಂದ್ರ ನೆನಿಸಿ ಕೊಂಡೆಯೋ ಶ್ರೀ
ಪುರಂದರ ವಿಠಲನೇ || ೧೧ ||

## ಪದ 3

ಏಳಯ್ಯ ಶ್ರೀಹರಿ ಬೆಳಗಾಯಿತು || ಪ ||

ಏಳು ದೇವಕಿ ತನಯ ನಂದನ ಕಂದ
ಏಳು ಗೋವರ್ಧನ ಗೋವಳರಾಯ
ಏಳು ಮಂದರ ಧರ ಗೋವಿಂದ ಫಣಿಶಾಯಿ
ಏಳಯ್ಯ ಒಲಿದು ಉಪ್ಪವಡಿಸಯ್ಯ || ೧ ||

ಧೀರ ಕ್ಷೀರಸಾಗರವಾಸ ಬೆಳಗಾಯಿತೇಳು
ಮೂರು ಲೋಕಗಳ ಒಡೆಯ ಲಕ್ಷ್ಮೀಪತಿಯೆ
ವಾರಿಜನಾಭನೆ ದೇವದೇವೇಶನೇ ನೀನು
ಈರೇಳು ಲೋಕ ಕಾಧಾರ ಶ್ರೀಹರಿಯೇ || ೨ ||

ಸುರರು ಮುನಿಗಳು ಕೂಡಿ ಅವಧಾನವೆನುತಿರಲು
ಸುರವನಿತೆಯರೆಲ್ಲ ನೆರೆದು ಆರುತಿಯ ಹಿಡಿದಿರಲು

ಭರದಿ ಊರ್ವಶಿ ರಂಭೆಯರು ನಾಟ್ಯವಾಡುತಿರಲು
ಕರುಣಿಸೋ ಪುರಂದರ ವಿಠಲ ನೀನೇಳು || ೩ ||

ತಿರುಪತಿ ವೆಂಕಟರಮಣ ನಿನಗೇತಕೆ ಬಾರದು ಕರುಣ || ಪ ||
ನಂಬಿದೆ ನಿನ್ನಯ ಚರಣ ಪರಿಪಾಲಿಸಬೇಕೊ ಕರುಣ || ಅ ||
ಅಳಗಿರಿಯಿಂದಲಿ ಬಂದ ಸ್ವಾಮಿ ಅಂಜನಗಿರಿಯಲಿ ನಿಂದ
ಕೊಳಲು ಧ್ವನಿಯೂದೋ ಚಂದ ನಮ್ಮ ಕುಂಡಲರಾಯ ಮುಕುಂದ || ೧ ||
ದೇಟಿ ಯಾಡುತ ಬಂದ ಸ್ವಾಮಿ ಬೆಟ್ಟದ ಮೇಲೆ ನಿಂದ
ಮಾಟುಗಾರ ಗೋವಿಂದ ಅಲ್ಲಿ ಜೇನು ಸಕ್ಕರೆಯನು ತಿಂದ || ೨ ||
ಮೂಡಲಗಿರಿಯಲಿ ನಿಂತ ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತ ಈ ಈರೇಳು ಲೋಕಕನಂತ || ೩ ||
ಆಡಿದರೆ ಸ್ಥಿರವಪ್ಪ ಅಬದ್ಧಗಳಾಡಲು ಒಪ್ಪ
ಬೇಡಿದ ವರಗಳನಿಪ್ಪ ನಮ್ಮ ಮೂಡಲಗಿರಿ ತಿಮ್ಮಪ್ಪ || ೪ ||
ಅಪ್ಪವು ಅತಿರಸ ಮೆದ್ದ ಸ್ವಾಮಿ ಅಸುರರ ಕಾಲಿಲಿ ಒದ್ದ
ಸತಿಯ ಕೂಡಾಡುತಲಿದ್ದ ಸ್ವಾಮಿ ಸಕಲ ದುರ್ಜನರನು ಗೆದ್ದ || ೫ ||
ಬಗೆ ಬಗೆ ಭಕ್ಷ ಪರಮಾನ್ನ ನಾನಾ ಬಗೆಯ ಸಕಲ ಶಾಲ್ಯನ್ನ
ಬಗೆ ಬಗೆ ಸೊಬಗು ಮೋಹನ್ನ ನಮ್ಮ ನಗುಮುಖದ ಸುಪ್ರಸನ್ನ || ೬ ||
ಕಾಶಿ ರಾಮೇಶ್ವರದಿಂದ ಅಲ್ಲಿ ಕಾಣಿಕೆ ಬರುವುದು ಚಂದ
ದಾಸರ ಕೂಡೆ ಗೋವಿಂದ ಅಲ್ಲಿ ದಾರಿ ನಡೆವುದೆ ಚಂದ || ೭ ||
ಎಲ್ಲಾ ದೇವರ ಗಂಡ ಅವ ಚೆಲ್ಲರೆ ದೈವದ ಮಿಂಡ
ಬಲ್ಲಿದರಿಗೆ ಉದ್ದಂಡ ಶಿವ ಬಿಲ್ಲಮುರಿದ ಪ್ರಚಂಡ || ೮ ||
ಕಾಸು ತಪ್ಪಿದರೆ ಪಟ್ಟಿ ಬಡ್ಡಿ ಕಾಸು ಬಿಡದೆ ಗಂಟು ಕಟ್ಟಿ
ದಾಸನೆಂದರೆ ಬಿಡಗಟ್ಟಿ ನಮ್ಮ ಕೇಸಕ್ಕಿತಿಮ್ಮಪ್ಪಶೆಟ್ಟಿ || ೯ ||
ದಾಸರ ಕಂಡರೆ ಪ್ರಾಣ ತಾ ಧರೆಯೊಳಗಧಿಕ ಪ್ರವೀಣ
ದ್ವೇಷಿಯ ಗಂಟಲಗಾಣ ನಮ್ಮ ದೇವಗೆ ನಿತ್ಯ ಕಲ್ಯಾಣ || ೧೦ ||
ಮೋಸಹೋಗುವವನಲ್ಲಯ್ಯ ಒಂದು ಕಾಸಿಗೆ ಒಡ್ಡುವ ಕೈಯ್ಯ
ವಿಸು ಮಹಿಮೆಗಾರನಯ್ಯ ನಮ್ಮ ವಾಸುದೇವ ತಿಮ್ಮಯ್ಯ || ೧೧ ||
ಚಿತ್ತವಧಾನ ಪರಾಕು ನಿನ್ನ ಚಿತ್ತದ ದಯ ಒಂದೇ ಸಾಕು
ಸತ್ಯವಾಹಿನಿ ನಿನ್ನ ವಾಕು ನೀನು ಸಕಲ ಜನರಿಗೆ ಬೇಕು || ೧೨ ||

ಅಲ್ಲಿದೆ ಪರಿಷೆಯ ಗುಂಪು ಮ ತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮ ತ್ತಲ್ಲಲ್ಲಿ ಪರಿಮಳ ದಿಂಪು ||
ಅಲ್ಲಲ್ಲಿ ಜನಗಳ ಕೂಟ ಮ ತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮತ್ತಲ್ಲಿಂದ ಊರಿಗೆ ಓಟ ||
ಪಾಪವಿನಾಶಿನಿ ಸ್ನಾನ ಹರಿ ಪಾದೋದಕವೇ ಪಾನ
ಕೋಪತಾಪಗಳ ನಿಧಾನ ನಮ್ಮ ಪುರಂದರವಿಠಲನ ಧ್ಯಾನ ||

--------

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶ ಕೇಶವ ||
ಶರಣು ಹೊಕ್ಕೆನಯ್ಯ ಎನ್ನ ಮರಣಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ ನಾರಾಯಣಾ ||
ಶೋಧಿಸೆನ್ನ ಮನದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವಾ ಯಮನ ಬಾಧೆ ಬಿಡಿಸು ಮಾಧವಾ ||
ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದಾ ||
ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು ಕಷ್ಟ ಬಿಡಿಸು ವಿಷ್ಣುವೆ ||
ಮೊದಲು ನಿನ್ನ ಪಾದ ಪೂಜೆ ಮುದದಿ ಮಾಳ್ಪೆನಯ್ಯ ನಾನು
ಹೃದಯದೊಳಗೆ ಹುದುಗಿಸಯ್ಯ ಮಧುಸೂದನಾ ||
ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾ
ಜವನ ಬಾಧೆಯನ್ನು ಬಿಡಿಸು ಶ್ರೀ ತ್ರಿವಿಕ್ರಮಾ ||
ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನಾ ||
ಮದನನಯ್ಯ ನಿನ್ನ ಮಹಿಮೆ ವದನದಲಿಯೆ ಇರುವಂತೆ
ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರಾ ||
ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ನೀನು ಹಾಕದಿರೋ ಹೃಷೀಕೇಶನೆ ||

ಅಬ್ಧಿಯೊಳಗೆ ಬಿದ್ದು ನಾನು ಒದ್ದುಕೊಂಬೆನಯ್ಯ ಭವದಿ
ಗೆದ್ದು ಪೋಪ ಬುದ್ಧಿ ತೋರು ಪದ್ಮನಾಭನೆ || ೧೦ ||

ಕಾಮ-ಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀ ಮಹಾನುಭಾವನಾದ ದಾಮೋದರಾ || ೧೧ ||

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳು ಸಂಕರುಷಣ || ೧೨ ||

ಏಸು ಜನ್ಮಬಂದರೇನು ದಾಸನಾಗಲಿಲ್ಲ ನಾನು
ಗಾಸಿಮಾಡದಿರು - ಇನ್ನು ವಾಸುದೇವನೆ || ೧೩ ||

ಬುದ್ಧಿ ಶೂನ್ಯನಾಗಿ ನಾನು ಕದ್ದ ಕಳ್ಳನಾದೆ ಎನ್ನ
ತಿದ್ದಿ ಹೃದಯ ಶುದ್ಧಮಾಡು ಪ್ರದ್ಯುಮ್ನನೆ || ೧೪ ||

ಜನನಿ ಜನಕ ನೀನೆಯೆಂದು ಎನುವೆನಯ್ಯ ದೀನ ಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ || ೧೫ ||

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ
ಇರಿಸು ನಿನ್ನ ಚರಣದಲ್ಲಿ ಪುರುಷೋತ್ತಮಾ || ೧೬ ||

ಸಾಧುಸಂಗ ಕೊಟ್ಟು ನಿನ್ನ ಪಾದಭಜಕನೆನಿಸು ಎನ್ನ
ಭೇದಮಾಡಿ ನೋಡದಿರು ಅಧೋಕ್ಷಜಾ || ೧೭ ||

ಚಾರುಚರಣ ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರಹಾಕಿರುವೆ ನಿನಗೆ ನಾರಸಿಂಹನೆ || ೧೮ ||

ಸಂಚಿತಾರ್ಥ ಪಾಪಗಳನು ಕಿಂಚಿತಾದರಿಡದಂತೆ
ಮುಂಚಿತಾಗಿ ಕಳೆಯಬೇಕು ಸ್ವಾಮಿ ಅಚ್ಯುತಾ || ೧೯ ||

ಜ್ಞಾನಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಎನ್ನ
ಹೀನಬುದ್ಧಿ ಬಿಡಿಸೊ ಮುನ್ನ ಜನಾರ್ದನಾ || ೨೦ ||

ಜಪ-ತಪಾನುಷ್ಠಾನ ನೀನು ಒಪ್ಪುವಂತೆ ಮಾಡಲಿಲ್ಲ
ತಪ್ಪುಕೋಟಿ ಕ್ಷಮಿಸಬೇಕು ಉಪೇಂದ್ರನೆ || ೨೧ ||

ಮೊರೆಯ ಇಡುವೆನಯ್ಯ ನಿನಗೆ ಸೆರೆಯ ಬಿಡಿಸು ಭವದ ಎನಗೆ
ಇರಿಸು ಭಕ್ತರೊಳಗೆ ಪರಮ ಪುರುಷ ಶ್ರೀಹರೆ || ೨೨ ||

ಪುಟ್ಟಿಸಲು ಬೇಡವಿನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟೆ ಬೇಡಿಕೊಂಬೆ ನಾನು ಶ್ರೀಕೃಷ್ಣನೆ || ೨೩ ||

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವವನ
ಅರ್ಥಿಯಿಂದ ಸಲಹುವನು ಕರ್ತೃಕೇಶವ || ೨೪ ||

ಮರೆತು ಬಿಡದೆ ಹರಿಯ ನಾಮ ಬರೆದು ಓದಿ ಕೇಳಿದರಿಗೆ
ಕರೆದು ಕೊಡುವ ಮುಕ್ತಿ ಬಾಡದಾದಿಕೇಶವ || ೨೫ ||

-------

ರಾಗ : ದೇಶಿ ತಾಳ : ಏಕ

ಬಿಡೆನೋ ನಿನ್ನಂಘ್ರಿ ಶ್ರೀನಿವಾಸ ಎನ್ನ-
ದುಡಿಸಿಕೊಳ್ಳೆಲೋ ಶ್ರೀನಿವಾಸ ನಿ-
ನ್ನುಡಿಯೇ ಜಿತಲ್ಲೊ ಶ್ರೀನಿವಾಸ ನನ್ನ-
ನಡೆ ತಪ್ಪುಕಾಯೊ ಶ್ರೀನಿವಾಸ || ಪ ||

ಬಡಿಯೋ ಬೆನ್ನಲಿ ಶ್ರೀನಿವಾಸ ನ-
ನ್ನೊಡಲ ಹೊಯ್ಯದಿರೋ ಶ್ರೀನಿವಾಸ ನಾ-
ಬಡವ ಕಾಣೆಲೋ ಶ್ರೀನಿವಾಸ ನಿ-
ನ್ನೊಡಲ ಹೊಕ್ಕೆನೋ ಶ್ರೀನಿವಾಸ || ೧ ||

ಪಂಜು ಪಿಡಿವೆನೋ ಶ್ರೀನಿವಾಸ ನಿ-
ನ್ನೆಂಜಲ ಬಳದುಂಬೆ ಶ್ರೀನಿವಾಸ ನಾ
ಸಂಜೆ ಉದಯಕೆ ಶ್ರೀನಿವಾಸ ಕಾ-
ಳಂಜೆಯ ಪಿಡಿವೆ ಶ್ರೀನಿವಾಸ || ೨ ||

ಸತ್ತಿಗೆ ಚಾಮರ ಶ್ರೀನಿವಾಸ ನಾ-
ನೆತ್ತಿಕುಣಿವೆನೋ ಶ್ರೀನಿವಾಸ ನಿನ್ನ-
ರತ್ನಧಾವಿಗೆ ಶ್ರೀನಿವಾಸ ನಾ-
ಹೊತ್ತು ನಲಿವೆನೋ ಶ್ರೀನಿವಾಸ || ೩ ||

ಹೇಳಿದಂತಾಲಿಪೆ ಶ್ರೀನಿವಾಸ ನಿ-
ನ್ನಾಳಿಗಾಳಾಗಿಹೆ ಶ್ರೀನಿವಾಸ ಅವ-
ರೂಳಿಗಮಾಳ್ಪೆ ಶ್ರೀನಿವಾಸ ನನ್ನ-
ಪಾಲಿಸೊ ಬಿಡದೆ ಶ್ರೀನಿವಾಸ || ೪ ||

ನಿನ್ನ ನಾಮ ಹೋಳಿಗೆ ಶ್ರೀನಿವಾಸ ಕಳ್ಳ-
ಕುನ್ನಿ ನಾನಾಗಿಹೆ ಶ್ರೀನಿವಾಸ ಕಟ್ಟಿ

ನಿನ್ನ ವರೊಡ್ಡರೆ ಶ್ರೀನಿವಾಸ ನನ-
ಗಿನ್ನು ಲಜ್ಜೇತಕೆ ಶ್ರೀನಿವಾಸ ||೫||
ಬೀಸಿ ಕೊಲ್ಲಲವರೆ ಶ್ರೀನಿವಾಸ ಮುದ್ರೆ-
ಕಾಸಿ ಚುಚ್ಚಲವರೆ ಶ್ರೀನಿವಾಸ ಮಿಕ್ಕ-
ಘಾಸಿಗಂಜೆನಯ್ಯ ಶ್ರೀನಿವಾಸ ಎಂಜ-
ಲಾಸೆಯ ಬಂಟ ನಾ ಶ್ರೀನಿವಾಸ ||೬||
ನಿನ್ನವ ನಿನ್ನವ ಶ್ರೀನಿವಾಸ ನಾ-
ನನ್ಯವನರಿಯೆನು ಶ್ರೀನಿವಾಸ ಅಯ್ಯ
ಮನ್ನಿಸೊ ತಾಯ್ತಂದೆ ಶ್ರೀನಿವಾಸ ಪ್ರ-
ಸನ್ನ ವೆಂಕಟಾದ್ರಿ ಶ್ರೀನಿವಾಸ ||೭||

--------

ಭಾನುಕೋಟಿತೇಜ ಲಾವಣ್ಯಮೂರುತಿ
ಶ್ರೀವೇಂಕಟೇಶನೆ ನಮೋ ನಮೋ ಶ್ರೀನಿವಾಸದಯಾನಿಧೆ ||೧||
ಶೇಷಾಚಲನಿವಾಸ ದೋಷದೂರನೆ ಭಕ್ತಪೋ-
ಷಕ ಶ್ರೀಕಾಂತ ನಮೋ ನಮೋ ಶ್ರೀನಿವಾಸದಯಾನಿಧೆ ||೨||
ನೀಲಮೇಘಶ್ಯಾಮ ಪಾಲಸಾಗರಶಯನ ಶ್ರೀ
ಲಕುಮೀಶನೆ ನಮೋ ನಮೋ ಶ್ರೀನಿವಾಸದಯಾನಿಧೆ ||೩||
ಖಗರಾಜವಾಹನ ಜಗದೊಡೆಯನೆ ನಿನ್ನ
ಅಗಣಿತ ಮಹಿಮೆಗೆ ನಮೋ ನಮೋ ಶ್ರೀನಿವಾಸದಯಾನಿಧೆ ||೪||
ಶಂಖ ಚಕ್ರಧರ ವೆಂಕಟರಮಣ ಅಕ-
ಳಂಕಮೂರುತಿ ದೇವ ನಮೋ ನಮೋ ಶ್ರೀನಿವಾಸದಯಾನಿಧೆ ||೫||
ಪನ್ನಂಗಶಯನನೆ ನಿನ್ನಂಥ ದೇವರು
ಇನ್ನುಂಟೆ ಅಜಭವಸುರವಂದ್ಯ ಶ್ರೀನಿವಾಸದಯಾನಿಧೆ ||೬||
ಸೃಷ್ಟಿ ಇಲ್ಲದಲೆ ಒತ್ತಟ್ಟಿಗಿದ್ದವರನ್ನು
ಸೃಷ್ಟಿಸಿ ಜೀವರ ಸಲಹುವಿ ಶ್ರೀನಿವಾಸ ದಯಾನಿಧೆ ||೭||
ತನುಮನಕರಣಗಳನು ಕೊಟ್ಟು ಅನಿಮಿಷ-
ರನು ಅಭಿಮಾನಿಗಳೆನಿಸಿದೀ ಶ್ರೀನಿವಾಸದಯಾನಿಧೆ ||೮||

ದೀನವತ್ಸಲ ನಿನ್ನಾಧೀನದೊಳಗಿಟ್ಟು
ಜ್ಞಾನ ಕರ್ಮಗಳ ಮಾಡಿಸುವಿಯೋ ಶ್ರೀನಿವಾಸದಯಾನಿಧೆ ||೯||

ಕ್ಷಣಬಿಡದಲೆ ಭಕ್ತಜನರ ರಕ್ಷಿಸುವಿ ದು-
ರ್ಜನರಿಗೆ ದುರ್ಲಭನೆನಿಸುವಿ ಶ್ರೀನಿವಾಸದಯಾನಿಧೆ ||೧೦||

ವೈಷಮ್ಯ ನೈರ್ಘೃಣ್ಯ ಲೇಶವಿಲ್ಲದವರು-
ಪಾಸನದಂತೆ ಫಲಗಳೀವಿ ಶ್ರೀನಿವಾಸದಯಾನಿಧೆ ||೧೧||

ಒಂದೆರೂಪದಿ ಬಹುಮಂದಿಯೊಳಗಿದ್ದು
ಬಂಧಮೋಕ್ಷಪ್ರದನೆನಿಸುವಿ ಶ್ರೀನಿವಾಸದಯಾನಿಧೆ ||೧೨||

ಜ್ಞಾನಿಗಳರಸ ಅಜ್ಞಾನಿಗಳೊಳು ನಾ ಅ-
ಜ್ಞಾನಿ ಸುಜ್ಞಾನವ ಪಾಲಿಸೋ ಶ್ರೀನಿವಾಸದಯಾನಿಧೆ ||೧೩||

ನಂಬಿದೆ ನಾ ನಿನ್ನ ಬಿಂಬಮೂರುತಿ ಎನ್ನ
ಡಿಂಬದೊಳಗೆ ಪೊಳೆ ಅನುದಿನ ಶ್ರೀನಿವಾಸದಯಾನಿಧೆ ||೧೪||

ನಿನ್ನ ಹೊರತು ಎನಗನ್ಯರಿಂದೇನಯ್ಯ
ನಿನ್ನ ಸ್ತುತಿಪ ಸುಖಕ್ಕೆಣೆಗಾಣೆ ಶ್ರೀನಿವಾಸದಯಾನಿಧೆ ||೧೫||

ಘನ್ನಮಹಿಮ ಎನಗಿನ್ನೊಂದು ಬಯಕಿಲ್ಲ
ನಿನ್ನ ಧ್ಯಾನದೊಳಿಡು ಮರೆಯದೆ ಶ್ರೀನಿವಾಸದಯಾನಿಧೆ ||೧೬||

ದುರ್ಜನಸಂಗ ವಿವರ್ಜಮಾಡಿಸಿ ಸಾಧು
ಸಜ್ಜನರ ಸೇವೆಯೊಳಗಿಡೋ ಶ್ರೀನಿವಾಸದಯಾನಿಧೆ ||೧೭||

ಏಸು ಜನ್ಮಗಳೀಯೆ ಲೇಸು ಚಿಂತೆಯು ಇಲ್ಲ
ದಾಸನೆಂದೆನಿಸೊ ದಾಸ್ಯವನಿತ್ತೊ ಶ್ರೀನಿವಾಸದಯಾನಿಧೆ ||೧೮||

ಎನ್ನಪ್ಪ ಎನ್ನಣ್ಣ ಎನ್ನಕಾಯುವ ದೇವ
ನಿನ್ನ ವಿಸ್ಮರಣೆಯ ಕೊಡದಿರೋ ಶ್ರೀನಿವಾಸದಯಾನಿಧೆ ||೧೯||

ಮನಸಿನ ಚಂಚಲವನು ತೊಲಗಿಸಿ ಪಾದ
ವನಜದಲ್ಲಿರಿಸಯ್ಯ ಜಿತವಾಗೀ ಶ್ರೀನಿವಾಸದಯಾನಿಧೆ ||೨೦||

ಕರಣಂಗಳಿಂದ ಆಚರಿಸುವ ವಿಷಯ ಶ್ರೀ-
ಹರಿ ನಿನ್ನ ಸೇವೆಯಾಗಲಿ ಸ್ವಾಮಿಾ ಶ್ರೀನಿವಾಸದಯಾನಿಧೆ ||೨೧||

ಬುದ್ಧಿ ಪೂರ್ವಕ ಗುರು ಮಧ್ವಮತವ ತಿಳಿ-
ದಿದ್ದವನೆ ಜ್ಞಾನ ವೃದ್ಧನೋ ಶ್ರೀನಿವಾಸದಯಾನಿಧೆ ||೨೨||

ಹರಿಯೆ ಸರ್ವೋತ್ತಮ ಸುರರೆಲ್ಲ ದಾಸರು
ತಾರತಮ್ಯ ಭೇದ ಜ್ಞಾನವನೀಯೋ ಶ್ರೀನಿವಾಸದಯಾನಿಧೆ || ೨೩ ||
ಗುರುಗಳ ಕರುಣ ಸುಸ್ಥಿರವಾಗಿದ್ದವರಿಗೆ
ಹರಿ ನಿನ್ನ ಅನುಗ್ರಹವಾಗುವುದೋ ಶ್ರೀನಿವಾಸದಯಾನಿಧೆ || ೨೪ ||
ನಿನ್ನವರಲ್ಲದೆ ಅನ್ಯರು ಬಲ್ಲರೆ
ಘನ್ನಮತದ ಸುಖಸವಿಯನ್ನೂ ಶ್ರೀನಿವಾಸದಯಾನಿಧೆ || ೨೫ ||
ನಿನ್ನ ಚಿತ್ತಕೆ ಬಂದದೆನ್ನ ಚಿತ್ತಕೆ ಬರಲಿ
ಅನ್ಯಥ ಬಯಕೆಯ ಕೊಡದಿರೊ ಶ್ರೀನಿವಾಸದಯಾನಿಧೆ || ೨೬ ||
ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ
ಪ್ರತಿಧಿನ ಸುಖ ಅಭಿವೃದ್ಧಿಯೋ ಶ್ರೀನಿವಾಸದಯಾನಿಧೆ || ೨೭ ||
ಗುರುಗಳು ಮಧ್ವರಾಯರು ಮೂರುಲೋಕಕ್ಕೆ
ಧೊರೆ ಗುರುಶ್ರೀಶವಿಠಲ ನಮೋ ಶ್ರೀನಿವಾಸದಯಾನಿಧೆ || ೨೮ ||

-------

ಕೌಸಲ್ಯಜವರವಂಶೋದ್ಭವ ಸುರ ಸಂಸೇವಿತ ಪದ ಶ್ರೀರಾಮ ಹರೇ
ಕಂಸಾದ್ಯ ಸುರರ ಧ್ವಂಸಗೈದಯದು ವಂಶೋದ್ಭವ ಶ್ರೀಕೃಷ್ಣ ಹರೇ || ೧ ||
ಮುನಿಮುಖರಕ್ಷಕ ದನುಜರಶಿಕ್ಷಕ ಫಣಿಧರ ಸನ್ನುತರಾಮಹರೇ
ಘನವರ್ಣಾಂಗಸುಮನಸರೊಡೆಯ ಶ್ರೀ ವನಜಾಸನಪಿತ ಕೃಷ್ಣ ಹರೇ || ೨ ||
ಶಿಲೆಯಪಾದರಜದಿ ಸ್ತ್ರೀ ಮಾಡಿದ ಸುಲಲಿತ ಗುಣನಿಧಿ ರಾಮ ಹರೇ
ಬಲುವಕ್ರಾಗಿದ್ದ ಬಲೆಯ ಕ್ಷಣದಲಿ ಚೆಲುವೆಯ ಮಾಡಿದ ಕೃಷ್ಣ ಹರೇ || ೩ ||
ಹರಧನು ಭಂಗಿಸಿ ಹರುಷದಿ ಜಾನಕಿ ಕರವ ಪಿಡಿದ ಶ್ರೀರಾಮ ಹರೇ
ಸಿರಿರುಕ್ಮಿಣಿಯನು ತ್ವರದಲಿ ಒಲಿಸಿದ ಶರಣರ ಪಾಲಕ ಶ್ರೀಕೃಷ್ಣ ಹರೇ || ೪ ||
ಜನಕ ಪೇಳೆ ಲಕ್ಷ್ಮಣ ಸೀತಾ ಸಹ ವನಕೆ ತೆರಳಿದ ಶ್ರೀರಾಮ ಹರೇ
ವನಕೆ ಪೋಗಿ ತನ್ನಣುಗರೊಡನೆ ಗೋ ವನು ಪಾಲಿಪ ಶ್ರೀಕೃಷ್ಣ ಹರೇ || ೫ ||
ತಾಟಕಿ ಖರಮಧು ಕೈಟಭಾರಿಪಾ ಪಾಟವಿ ಸುರಮುಖ ರಾಮ ಹರೇ
ಆಟದಿ ಫಣಿಮೇಲ್ ನಾಟ್ಯವ ನಾಡಿದ ಖೇಟವಾಹ ಶ್ರೀ ಕೃಷ್ಣ ಹರೇ || ೬ ||
ಚದುರೆ ಶಬರಿಯಿತ್ತ ಬದರಿಯ ಫಲವನು ಮುದದಿ ಸೇವಿಸಿದ ರಾಮ ಹರೇ
ವಿದುರನಕ್ಷೀರಕೆವದಗಿ ಪೋದ ಶ್ರೀ ಪದುಮನಾಭ ಜಯಕೃಷ್ಣ ಹರೇ || ೭ ||

ಸೇವಿತ ಹನುಮಸುಗ್ರೀವನ ಸಖಜಗ ತ್ಪಾವನ ಪರತರ ರಾಮ ಹರೇ
ದೇವಕಿ ವಸುದೇವರ ಸೆರೆಬಿಡಿಸಿದ ದೇವ ದೇವ ಶ್ರೀಕೃಷ್ಣ ಹರೇ || ೮ ||
ಗಿರಿಗಳಿಂದ ವರಶರಧಿ ಬಂಧಿಸಿದ ಪರಮ ಸಮರ್ಥ ಶ್ರೀರಾಮ ಹರೇ
ಗಿರಿಯ ತನ್ನ ಕಿರಿಬೆರಳಿಲೆತ್ತಿ ಗೋ ಪರನ ಕಾಯ್ದ ಶ್ರೀಕೃಷ್ಣ ಹರೇ || ೯ ||
ಖಂಡಿಸಿ ದಶಶಿರ ಚಂಡಾಡಿದ ಕೋ ದಂಡಪಾಣಿ ಶ್ರೀರಾಮ ಹರೇ
ಪಾಂಡು ತನಯರಿಂ ಚಂಡ ಕೌರವರ ದಿಂಡುಗೆಡಹಿಸಿದ ಶ್ರೀಕೃಷ್ಣ ಹರೇ || ೧೦ ||
ತವಕದಯೋಧ್ಯಾಪುರಕೈದಿದ ತ ನ್ನುವತಿಯೊಡನೆ ಶ್ರೀರಾಮ ಹರೇ
ರವಿಸುತ ತನಯಗೆ ಪಟ್ಟವಗಟ್ಟಿದ ಭವತಾರಕ ಶ್ರೀಕೃಷ್ಣ ಹರೇ || ೧೧ ||
ಭರತನು ಪ್ರಾರ್ಥಿಸಲರಸತ್ತ್ವವ ಸ್ವೀಕರಿಸಿದ ತ್ವರದಲಿ ರಾಮ ಹರೇ
ವರಧರ್ಮಾದ್ಯರ ಧರಿಯೊಳು ಮೆರೆಸಿದ ಪರಮ ಕೃಪಾಕರ ಕೃಷ್ಣ ಹರೇ || ೧೨ ||
ಧರೆಯೊಳಜ್ಞಜನರನು ಮೋಹಿಪುದಕೆ ಹರನ ಪೂಜಿಸಿದ ರಾಮ ಹರೇ
ಹರನ ಪ್ರಾರ್ಥಿಸಿ ವರವನು ಪಡೆದಾ ಚರಿತೆ ಯಗಾಧವು ಕೃಷ್ಣ ಹರೇ || ೧೩ ||
ಅತುಳಮಹಿಮ ಸದ್ಕೃತಿಗಳ ಹೃದಯದಿ ಸತತ ವಿರಾಜಿಪ ರಾಮ ಹರೇ
ಸಿತ ವಾಹನ ಸಾರಥಿಯೆನಿಸಿದ ಸುರತತಿ ಪೂಜಿತ ಪದ ಕೃಷ್ಣ ಹರೇ || ೧೪ ||
ರಾಮ ರಾಮ ಯಂದ್ನೇಮದಿ ಭಜಿಪರ ಕಾಮಿತ ಫಲದ ಶ್ರೀರಾಮ ಹರೇ
ಪ್ರೇಮಧಿ ಭಕ್ತರ ಪಾಲಿಪ ಶ್ರೀ ವರ ದೇಶ ವಿಠಲ ಶ್ರೀಕೃಷ್ಣ ಹರೇ || ೧೫ ||

* * * * *



